# ಋಗ್ವೇದ ಪ್ರಯೋಗ ದೀಪಿಕಾ

(ಶ್ರೀ ನೃಸಿಂಹ ಪ್ರಯೋಗ ಪಾರಿಜಾತ ಆಶ್ವಲಾಯನ ಪೂರ್ವಪ್ರಯೋಗ)



ಋಗ್ವೇದ ವಿಶಾರದ

ವೇ । ಬ್ರ । ಶ್ರೀ ಧಾಳೀ ಲಕ್ಷ್ಮೀನರಸಿಂಹ ಭಟ್ಟ

ಪ್ರಕಾಶಕರು

ಪ್ರಜಾ ಪ್ರಿಂಟರ್ಸ್ ಪ್ರೈ ಲಿಮಿಟೆಡ್

ಬೆಂಗಳೂರು - 560 019

ಶ್ರೀಃ

# ಋಗ್ವೇದ ಪ್ರಯೋಗ ದೀಪಿಕಾ

(ಶ್ರೀನೃಸಿಂಹ ಪ್ರಯೋಗ ಪಾರಿಜಾತ ಆಶ್ವಲಾಯನ ಪೂರ್ವಪ್ರಯೋಗಃ)

ವೇ। ಬ್ರ। ಶ್ರೀ॥ ಧಾಳೀ ಲಕ್ಷ್ಮೀನರಸಿಂಹ ಭಟ್ಟರು

(ರಾಷ್ಟ್ರ ಮತ್ತು ರಾಜ್ಯ ಪ್ರಶಸ್ತಿ ವಿಜೇತರು)

ಪ್ರಕಾಶಕರು

ಪ್ರಜಾ ಪ್ರಿಂಟರ್ಸ್ ಪ್ರೈ ಲಿಮಿಟೆಡ್

ಪ್ರಕಾಶನ ವಿಭಾಗ, 53/2 ಪ್ರಜಾಭವನ

ಬಸವಣ್ಣನ ಗುಡಿ ಬೀದಿ, ಬೆಂಗಳೂರು- 19

ದೂರವಾಣಿ : 6674261

ಪ್ರಕಾಶಕರು

ಪ್ರಜಾ ಪ್ರಿಂಟರ್ಸ್ ಪ್ರೈ ಲಿ.

53/2, ಪ್ರಜಾಭವನ, ಬಸವಣ್ಣನಗುಡಿ ಬೀದಿ, ಬೆಂಗಳೂರು-560 019

ಪ್ರಥಮ ಮುದ್ರಣ : 1991

ದ್ವಿತೀಯ ಮುದ್ರಣ : 1993 2000 ಪ್ರತಿಗಳು
ತೃತೀಯ ಮುದ್ರಣ : 1999 2000 ಪ್ರತಿಗಳು



ಬೆಲೆ : ರೂ. 120/-

ಮುದ್ರಕರು :

ಶ್ರೀರಂಗ ಪ್ರಿಂಟರ್ಸ್ ಅಂಡ್ ಬೈಂಡರ್ಸ್
ಶ್ರೀರಾಮಾಂಜನೇಯ ರಸ್ತೆ, ಹನುಮಂತನಗರ
ಬೆಂಗಳೂರು-19 ಫೋನ್ : 6679333

ॐ

# श्री श्री जगद्गुरु शङ्कराचार्य महासंस्थानम्
# दक्षिणाम्नाय श्री शारदापीठम् शृङ्गेरी

*PRIVATE SECRETARY*
To His Holiness
Sri Jagadguru Shankaracharya
Dakshinamnaya
Sri Sharada Peetham,
SRINGERI - 577139 (Karnataka)

Ref : ಡಿ-೧/2975

Camp : ಶೃಂಗೇರಿ

Date : 03/06/99

ಶ್ರೀಯುತ ವೈ. ವಿ. ಕೇಶವಮೂರ್ತಿಯವರಿಗೆ,

ನಿಮ್ಮ ಪತ್ರ (ದಿ. ೨೧-೦೫-೯೯) ಹಾಗೂ ವೇ|| ಬ್ರ|| ಶ್ರೀ ಧಾಳಿ ಲಕ್ಷ್ಮೀನರಸಿಂಹ ಭಟ್ಟರವರ ''ಋಗ್ವೇದ ಪ್ರಯೋಗ ದೀಪಿಕಾ'' ಪುಸ್ತಕ ತಲುಪಿ ಅವುಗಳನ್ನು ಪರಮಪೂಜ್ಯ ಶ್ರೀಶ್ರೀಜಗದ್ಗುರುಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ ಸಮರ್ಪಿಸಲಾಯಿತು.

ಪರಮಪೂಜ್ಯ ಶ್ರೀಶ್ರೀಗಳವರು ಪುಸ್ತಕವನ್ನು ಅವಲೋಕಿಸಿ ಋಗ್ವೇದಿಗಳಿಗೆ ಈ ಪುಸ್ತಕದಿಂದ ಬಹಳ ಉಪಕಾರವಾಗುತ್ತದೆಯೆಂದೂ, ಇದರ ಪರಿಶಿಷ್ಟದಲ್ಲಿ ಅನೇಕ ಉಪಯುಕ್ತ ವಿವರಣೆಗಳಿರುವುದರಿಂದ ಇದು ಇನ್ನೂ ಹೆಚ್ಚು ಸಾರ್ಥಕ್ಯದಿಂದ ಕೂಡಿದೆಯೆಂದೂ ಅಭಿಪ್ರಾಯಪಟ್ಟು ತುಂಬಾ ಸಂತೋಷಗೊಂಡಿದ್ದಾರೆ. ವೇ|| ಬ್ರ|| ಶ್ರೀ ಲಕ್ಷ್ಮೀನರಸಿಂಹ ಭಟ್ಟರಿಗೆ ಇತೋಪ್ಯತಿಶಯ ಯಶಸ್ಸು, ಶ್ರೇಯಸ್ಸು ಲಭಿಸಲೆಂದು ಪರಮಪೂಜ್ಯ ಶ್ರೀಶ್ರೀಗಳವರು ಆಶೀರ್ವದಿಸಿದ್ದಾರೆ.

ಶ್ರೀಶ್ರೀಗಳವರು ಅನುಗ್ರಹಿಸಿರುವ ಆಶೀರ್ಮಂತ್ರಾಕ್ಷತೆ ಮತ್ತು ಶ್ರೀ ಶಾರದಾ ಚಂದ್ರಮೌಳೀಶ್ವರರ ಪ್ರಸಾದವನ್ನು ಇದರೊಂದಿಗೆ ಕಳುಹಿಸುತ್ತಿದ್ದೇನೆ.

ಇಂತು,

ಗೆ,

ಶ್ರೀ ವೈ. ವಿ. ಕೇಶವಮೂರ್ತಿ
ಪ್ರಜಾ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್
ಪ್ರಜಾ ಭವನ,
53/2, ಬುಲ್ ಟೆಂಪಲ್ ರಸ್ತೆ
ಬೆಂಗಳೂರು - 560 019

ॐ

**H. H. SRI VISHWESHA THIRTHA SWAMIJI**
Jagadguru Sri Madhwacharya Moola Maha Samsthanam
Sri Pejawara Adhokshaja Matha, Udupi - 576 101
Phone : 08252-24198, 26598

**श्री श्री विश्वेशतीर्थ स्वामीजी**
**जगद्गुरु श्रीमध्वाचार्य मूल महा संस्थानम्**
**श्री पेजावर अधोक्षज मठ, उडुपि -576 101**

26-06-99
Bangalore

ವೇದವು ಜೀವನದ ಸಕಲ ಪುರುಷಾರ್ಥಗಳನ್ನು ನೀಡುವ ಕಲ್ಪವೃಕ್ಷವಾಗಿದೆ. ವೇದೋಕ್ತಕರ್ಮಾನುಷ್ಠಾನಗಳಿಂದ ಅರ್ಥ, ಕಾಮಗಳನ್ನು ಪಡೆದು ಲೌಕಿಕ ಜೀವನದ ಸುಖ, ಸಮೃದ್ಧಿಗಳನ್ನು ಅನುಭವಿಸಬಹುದು. ಅದರಂತೆ ವೈದಿಕ ಧರ್ಮಾಚರಣೆ ಹಾಗೂ ವೇದದ ಶ್ರವಣ, ಮನನಗಳಿಂದ ಅಂತಃಕರಣ ಶುದ್ಧಿ ಮತ್ತು ಆಧ್ಯಾತ್ಮಿಕ ಜ್ಞಾನವನ್ನೂ ಪಡೆದು ಧಾರ್ಮಿಕ ಉನ್ನತಿಯೊಂದಿಗೆ ಮುಕ್ತಿಯನ್ನೂ ಹೊಂದಬಹುದು. ಹೀಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ನೀಡಬಲ್ಲ ವೇದವು ಕಲ್ಪವೃಕ್ಷದಂತೆ ಸಕಲೇಷ್ಟಪ್ರದವಾಗಿದೆ. ಇಂತಹ ವೇದವು ಬೋಧಿಸಿದ ಕರ್ಮಾನುಷ್ಟಾನಗಳಿಗೆ ಅತ್ಯಂತ ಉಪಯುಕ್ತವಾದ ಋಗ್ವೇದ ಪ್ರಯೋಗ ದೀಪಿಕೆಯು ಪ್ರಕಟಗೊಳ್ಳುತ್ತಿರುವುದು ಅತ್ಯಂತ ಸಂತಸದ ಸಂಗತಿಯಾಗಿದೆ. ನಮ್ಮ ಅತ್ಯಂತ ಅಭಿಮಾನಪಾತ್ರರಾದ ವಿದ್ವಾನ್ ಶ್ರೀ ಧಾಳೀ ಲಕ್ಷ್ಮೀನರಸಿಂಹ ಭಟ್ಟರು ಒಳ್ಳೆ ಪರಿಶ್ರಮವಹಿಸಿ ಈ ಕೃತಿಯನ್ನು ರೂಪಿಸಿದ್ದಾರೆ. ನಮ್ಮ ಅತ್ಯಂತ ಪ್ರೀತಿ ಪಾತ್ರರಾದ ಶ್ರೀ ವೈ. ಕೆ. ಕೇಶವಮೂರ್ತಿಯವರು ಇದನ್ನು ಪ್ರಜಾಪ್ರಿಂಟರ್ಸ್ ವತಿಯಿಂದ ಪ್ರಕಾಶನಗೊಳಿಸಿದ್ದಾರೆ. ಈ ಇಬ್ಬರು ಮಹನೀಯರನ್ನು ಈ ಸಂದರ್ಭದಲ್ಲಿ ನಾವು ಅಭಿನಂದಿಸುತ್ತಾ ಈ ಗ್ರಂಥ ಪ್ರಕಾಶನಕ್ಕೆ ಪೂರ್ಣ ಯಶಸ್ಸನ್ನು ಕೋರುತ್ತೇವೆ.

ಇತಿ ಸಪ್ರೇಮ ನಾರಾಯಣಸ್ಮರಣೆಗಳು

(ಶ್ರೀ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ)

ಓಂ

ಶ್ರೀರಂಗಸದ್ಗುರವೇ ನಮಃ

ನಮಃ ಪರಮಋಷಿಭ್ಯಃ

# ಅನುಗ್ರಹ, ಆಶೀರ್ವಚನ

(ಶ್ರೀಮತ್ಪರಮಹಂಸ ಶ್ರೀಶ್ರೀರಂಗ ಪ್ರಿಯಮಹಾದೇಶಿಕಶ್ರೀಪಾದಶ್ರೀಶ್ರೀಗಳವರಿಂದ)

ಕೊಳೆಯಾಗಿರುವ ಪಾತ್ರೆಯನ್ನು ಮಣ್ಣು ಹುಣಸೇಹಣ್ಣು ನೀರು ಮುಂತಾದವುಗಳಿಂದ ಚೆನ್ನಾಗಿ ತೊಳೆದರೆ ಅದರ ಕೊಳಕು ಹೋಗಿ ಅದು ಶುದ್ಧವಾಗಿ ಹೊಳೆಯುತ್ತದೆ. ಅದಕ್ಕೆ ಮೆರಗು ಕೊಟ್ಟರೆ ಅದು ಮತ್ತೂ ಅತಿಶಯವಾದ ಹೊಳಪನ್ನು ಪಡೆದು ಥಳಥಳಿಸುತ್ತದೆ. ಶ್ರೇಷ್ಠವಾದ ಉಪಯೋಗಕ್ಕೆ ಬರುತ್ತದೆ. ಹೀಗೆ ದೋಷವನ್ನು ಹೋಗಲಾಡಿಸಿ ಅಥವಾ ಗುಣಾತಿಶಯವನ್ನುಂಟುಮಾಡಿ ಪದಾರ್ಥವು ಒಳ್ಳೆಯ ಉಪಯೋಗಕ್ಕೆ ಬರುವಂತೆ ಮಾಡುವ ಕರ್ಮಕ್ಕೆ ಸಂಸ್ಕಾರ ಎಂದು ಹೆಸರು. (''ಸಂಸ್ಕಾರೋಹಿ ದೋಷಾಪನಯನೇನ ವಾ ಭವತಿ ಗುಣಾಧಾನೇನ ವಾ'' ''ಸಂಸ್ಕಾರೋಹಿ ನಾಮ ಕಾರ್ಯಾಂತರ ಯೋಗ್ಯತಾಕರಣಂ''.) ದೇಹ ಮತ್ತು ಮನಸ್ಸುಗಳನ್ನು ಶುದ್ಧಿಪಡಿಸಿ ಅವುಗಳಿಗೆ ಅತಿಶಯವಾದ ಯೋಗ್ಯತೆಯನ್ನು ಉಂಟುಮಾಡುವ ಸಂಸ್ಕಾರಗಳೂ ಉಂಟು. ಉಪನಯನ, ವಿವಾಹ ಮುಂತಾದ ಸಂಸ್ಕಾರಗಳು ಈ ವರ್ಗಕ್ಕೆ ಸೇರಿದೆ. ಇವುಗಳನ್ನು ಆಚರಿಸುವುದರಿಂದ ಮನುಷ್ಯರಿಗೆ ಬೀಜ ಮತ್ತು ಗರ್ಭಗಳಿಗೆ ಸಂಬಂಧಪಟ್ಟ ಪಾಪಗಳು ತೊಳೆಯಲ್ಪಡುತ್ತವೆ.

**''ವೈಜಿಕಂ, ಗಾರ್ಭಿಕಂ, ಚೈನಃ ದ್ವಿಜಾನಾಂ ಅಪಮಾರ್ಜತಿ''**

ಚಿತ್ರಕ್ಕೆ ಸರಿಯಾಗಿ ಬಣ್ಣವನ್ನು ಬಳಿಯುತ್ತಾ ಹೋದಂತೆ ಅದು ಸ್ಫುಟವಾಗಿ ಉಜ್ವಲವಾಗುವಂತೆ ಸಂಸ್ಕಾರವನ್ನು ಆಚರಿಸುವುದರಿಂದ ಆತ್ಮವಿಕಾಸ ಉಂಟಾಗುತ್ತದೆ, ಚಿತ್ತಶುದ್ಧಿಯಾಗುತ್ತದೆ. ಅವುಗಳನ್ನು ಭಗವದರ್ಪಣ ಬುದ್ಧಿಯಿಂದ ಆಚರಿಸಿದರೆ ಜ್ಞಾನಪ್ರಕಾಶ ಉಂಟಾಗಿ ಬ್ರಹ್ಮಪದವು ಲಭಿಸುತ್ತದೆ. ಇಂತಹ ಸಂಸ್ಕಾರಗಳನ್ನು 11, 12, 18, 40 ಎಂದು ಮುಂತಾಗಿ ವಿಭಾಗಿಸಿದ್ದರೂ ಸಾಮಾನ್ಯವಾಗಿ 16 ಸಂಸ್ಕಾರಗಳನ್ನು ಶಾಸ್ತ್ರಗಳು ಪ್ರಧಾನವಾಗಿ ಹೇಳುತ್ತವೆ. ಇವುಗಳನ್ನು ಆಚರಿಸುವ ಪದ್ಧತಿಯು ಭಾರತೀಯ ಮಹರ್ಷಿಗಳ ಸಂಪ್ರದಾಯದಲ್ಲಿ ಅನಾದಿಕಾಲದಿಂದ ನಡೆದುಬರುತ್ತಿದೆ.

ಹೀಗಿದ್ದರೂ ಧಾರ್ಮಿಕ ಶಿಕ್ಷಣವು ತೊಲಗಿ ಅಧಾರ್ಮಿಕ ಶಿಕ್ಷಣವು ಹರಡುತ್ತಿರುವುದರಿಂದ ಜನರಲ್ಲಿ ಇವುಗಳನ್ನು ಆಚರಿಸುವ ಪದ್ಧತಿ ಶಿಥಿಲವಾಗುತ್ತಿದೆ. ಋಷಿಪ್ರೋಕ್ತವಾದ ಗೃಹ್ಯಸೂತ್ರಗಳನ್ನು ಅಥವಾ ಅವುಗಳಿಗೆ ಅನುಗುಣವಾಗಿ ಸಂಸ್ಕೃತ ಭಾಷೆಯಲ್ಲಿರುವ ಪ್ರಯೋಗಗಳನ್ನು ಅರ್ಥಮಾಡಿಕೊಂಡು ಅವುಗಳಂತೆ ಆಚರಣೆಮಾಡುವುದು ಸಾಮಾನ್ಯ ಜನರಿಗೆ ಕಷ್ಟವಾಗಿದೆ. ಇಂತಹ ಸಂದರ್ಭದಲ್ಲಿ ದೇಶ ಭಾಷೆಯಲ್ಲಿ ಅನುವಾದದೊಡನೆ ಸರಿಯಾಗಿ ಕರ್ಮಪ್ರಯೋಗವನ್ನು ತಜ್ಞರು ಮುದ್ರಿಸಿ ಒದಗಿಸಿಕೊಟ್ಟರೆ

ಕರ್ಮಾಚರಣೆಗೆ ತುಂಬಾ ಸಹಾಯವಾಗುತ್ತದೆ. ಈ ದಿಸೆಯಲ್ಲಿ ವಿದ್ವನ್ಮಣಿಗಳಾದ ವೇ|| ಬ್ರ|| ಶ್ರೀ|| ಥಾಳಿ ಲಕ್ಷ್ಮೀನರಸಿಂಹಭಟ್ಟರು ಒದಗಿಸಿ ಕೊಟ್ಟಿರುವ ಈ ಋಗ್ವೇದ ಪ್ರಯೋಗ ದೀಪಿಕೆಯು ಕರ್ಮಕರ್ತೃಗಳಿಗೆ ಮತ್ತು ಪುರೋಹಿತರಿಗೆ ಇಬ್ಬರಿಗೂ ಉಪಯೋಗ ಪಡುವುದರಲ್ಲಿ ಸಂಶಯವಿಲ್ಲ. ಈ ಗ್ರಂಥದಲ್ಲಿ ಮಂತ್ರ ಅವುಗಳ ಸಂಸ್ಕೃತ ಪ್ರಯೋಗ ಮತ್ತು ಕನ್ನಡ ಭಾಷಾನುವಾದವನ್ನು ಸುಂದರವಾಗಿ ಮಂಡಿಸಿದೆ ಮತ್ತು ಕೆಲವು ಕಡೆ ಪಾರಿಭಾಷಿಕ ಶಬ್ದಗಳ ಅರ್ಥವಿವರಣೆ ದ್ರವ್ಯಗಳ ಉಪಯೋಗ ಮುಂತಾದವುಗಳನ್ನೂ ಟಿಪ್ಪಣಿ ಮತ್ತು ಅನುಬಂಧಗಳಲ್ಲಿ ಸೇರಿಸಿಕೊಟ್ಟಿರುವುದು ಅತ್ಯಂತ ಪ್ರಶಂಸನೀಯವಾಗಿದೆ.

ಶ್ರೀ ಲಕ್ಷ್ಮೀನರಸಿಂಹಭಟ್ಟರು ವಿದ್ಯಾವಿನಯಸಂಪನ್ನರು, ಆತ್ಮಗುಣಪೋಷಿತರು ಮತ್ತು ವಂಶಪರಂಪರೆಯಿಂದಲೂ, ಅಭ್ಯಾಸ ಶಿಕ್ಷಣಗಳಿಂದಲೂ ಮಂತ್ರ ತಂತ್ರ ಪ್ರಯೋಗಗಳಲ್ಲಿ ನಿಷ್ಣಾತರಾಗಿದ್ದಾರೆ ಮತ್ತು ನೂರಾರು ಮಂದಿ ಶಿಷ್ಯರಿಗೆ ಅಧ್ಯಾಪನ ಮಾಡಿಸುತ್ತಿರುವ ಶ್ರೋತ್ರಿಯಶ್ರೇಷ್ಠರಾಗಿದ್ದಾರೆ. ಋಗ್ವೇದದಲ್ಲಿ ಸಲಕ್ಷಣ ಘನಾಂತ ಪಾಠಿಗಳು ಆಗಿರುವುದಲ್ಲದೆ ವೇದಾಂಗ ಶ್ರೌತಸ್ಮಾರ್ತ ಪ್ರಕ್ರಿಯೆಗಳಲ್ಲೂ ಪಾರಂಗತರಾಗಿದ್ದಾರೆ. ರಾಜ್ಯ ಸರ್ಕಾರ ಮತ್ತು ರಾಷ್ಟ್ರ ಸರ್ಕಾರಗಳಿಂದ ಪುರಸ್ಕೃತರಾಗಿರುವುದು ಮಾತ್ರವಲ್ಲದೆ ಅನೇಕ ಪ್ರಯೋಗಗ್ರಂಥಗಳನ್ನು ರಚಿಸಿ ಬರವಣಿಗೆಯಲ್ಲಿ ಪಳಗಿದ ಕೈಯನ್ನು ಹೊಂದಿದ್ದಾರೆ. ಋಗ್ವೇದ ಭೂಷಣ, ರತ್ನಪ್ರವೀಣ, ವಿಚಕ್ಷಣ, ಸಿಂಧು, ಪಟು ಮುಂತಾದ ಪದಗಳಿಂದ ಸಂಭಾವಿತರಾಗಿದ್ದಾರೆ. ಇವರ ಅನೇಕ ಗ್ರಂಥಗಳು ಜನಪ್ರಿಯವಾಗಿ ಪುನರ್ಮುದ್ರಣವನ್ನು ಪಡೆದಿವೆ.

ಇವರು ಆಸ್ಥೆಯಿಂದ ರಚಿಸಿರುವ ಈ ಋಗ್ವೇದಪ್ರಯೋಗ ದೀಪಿಕಾ ಗ್ರಂಥವು ಮುಖ್ಯವಾದ ಸಂಸ್ಕಾರ ಪ್ರಯೋಗಗಳಿಂದ ಮಾತ್ರವಲ್ಲದೆ ಅವುಗಳಿಗೆ ಸಂಬಂಧಪಟ್ಟ ಗ್ರಹಪೂಜೆ, ವಾಸ್ತುಶಾಂತಿ, ನಕ್ಷತ್ರೇಷ್ಟಿ, ಭೋಜನವಿಧಿ, ಸ್ನಾನವಿಧಿ ಮುಂತಾದ ಉಪಯುಕ್ತ ವಿಷಯಗಳಿಂದಲೂ ಅಲಂಕೃತವಾಗಿದೆ. ಈ ಗ್ರಂಥಕ್ಕೆ ಯೋಗ್ಯವಾದ ಪುರಸ್ಕಾರವು ದೊರೆತು ಇದು ಆಸ್ತಿಕರಿಗೆ ಉಪಯೋಗಪಡಲಿ, ಇವರಿಂದ ಇನ್ನೂ ಅನೇಕ ಉಪಯುಕ್ತ ಗ್ರಂಥಗಳು ರಚಿಸಲ್ಪಟ್ಟು ಜನತೆಯ ಉಪಯೋಗಕ್ಕೆ ಬರಲಿ ಮತ್ತು ಇವರು ಮಂಗಳಭಾಜನರಾಗಲಿ - ಎಂದು ನಾರಾಯಣ ಸ್ಮರಣೆ ಮಾಡುತ್ತೇವೆ.

ನಾರಾಯಣಸ್ಮೃತಯಃ
ಶ್ರೀ ಶ್ರೀ ರಂಗಪ್ರಿಯಶ್ರೀಪಾದ ಶ್ರೀ ಶ್ರೀಃ

ಅಧಿಕ ಜ್ಯೇಷ್ಠ ಶುದ್ಧ ಏಕಾದಶೀ ಮಂಗಳವಾರ
25.5.99
ಅಷ್ಟಾಂಗಯೋಗವಿಜ್ಞಾನಮಂದಿರಂ
ಬೆಂಗಳೂರು

ಓಂ

ವಿದ್ಯಾಲಂಕಾರ ಶಾಸ್ತ್ರ ಚೂಡಾಮಣಿ ಸಂಗೀತ ಕಲಾರತ್ನ

**ಪ್ರೊ|| ಸ. ಕೃ. ರಾಮಚಂದ್ರರಾವ್**

*Senior Associate, National Institute of Advanced Studies Bangalore*

*Visiting Professor Vivekananda Chair, University of Mysore*

ದ್ವಿಜನ್ಮವೆಂಬ ಮಾತಿನಲ್ಲಿ ಸಂಸ್ಕಾರಗಳ ಸ್ವಾರಸ್ಯ ಅಡಗಿದೆ. ಬರಿಯ ಹುಟ್ಟಿನಿಂದಲೇ ಸಹಜವಾಗಿ ಬೆಳೆಯುವುದರಿಂದಲೇ ಪುರುಷಾರ್ಥಸಿದ್ಧಿಗೆ ಸರಿಯಾದ ಸಾಮಗ್ರಿ ದೊರಕಲಾರದು ಸಂಸ್ಕೃತಿಯಲ್ಲಿ ಸ್ವಾರ್ಥ ಪರಾರ್ಥಗಳೆರಡನ್ನೂ ಸಾಧಿಸಬಲ್ಲ ಸಾಮರ್ಥ್ಯವನ್ನು ಪರಂಪರೆಯಿಂದ ಸಿದ್ಧಮಾಡಲಾಗುತ್ತದೆ. ಇದೇ ಶಾಸ್ತ್ರದ ಪ್ರಯೋಜನ. ಶಾಸ್ತ್ರದಲ್ಲಿ ಶೃತಿಯ ಇಂಗಿತವನ್ನು ಅರಿತುಕೊಂಡು ಸ್ಮೃತಿ ಗ್ರಂಥಗಳು ನಮ್ಮ ಅಭ್ಯುದಯ ನಿಃ ಶ್ರೇಯಸಗಳಿಗೆ ಅನುಕೂಲವಾಗುವಂಥ ನಡಾವಳಿಯನ್ನು ಸೂಚಿಸುತ್ತವೆ. ಈ ಬಗೆಯ ಉಪಕಾರಕ ನಿಬಂಧಗಳೇ ಪ್ರಯೋಗವೆನಿಸಿಕೊಳ್ಳುತ್ತವೆ. ಬದುಕಿನಲ್ಲಿ ಸಂಸ್ಕಾರಗಳನ್ನು ಅನುಕ್ರಮವಾಗಿ ಒದಗಿಸಲು ಪೂರ್ವಪ್ರಯೋಗಗಳು ವ್ಯಕ್ತಿಸತ್ತ ಮೇಲೆ ಬಂಧುಗಳು ಒದಗಿಸುವ ಔರ್ಧ್ವದೈಹಿಕವಾದ ಸಂಸ್ಕಾರಗಳು ಅಪರ. ಒಟ್ಟು ಷೋಡಶ ಸಂಸ್ಕಾರಗಳೆಂದು ಎಣಿಕೆ, ಇವುಗಳಲ್ಲಿ ಕಾಲಕ್ರಮ, ಯುಗಧರ್ಮಗಳನ್ನವಲಂಬಿಸಿ ಕೆಲವು ಪ್ರಧಾನವಾಗಿ ಉಳಿಯುತ್ತವೆ ಮತ್ತೆ ಕೆಲವು ಗೌಣವಾಗಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ನಾಮಕರಣ, ಚೌಲ, ಉಪನಯನ, ವಿವಾಹ ಅಂತ್ಯೇಷ್ಟಿ ಇವು ಇಂದಿಗೂ ಮುಖ್ಯವಾಗಿಯೇ ವ್ಯಾಪಕವಾಗಿವೆ. ಉಳಿದಂತೆ ಗರ್ಭಾದಾನ ಪುಂಸವನ ಸೀಮಂತೋನ್ನಯನ, ಉತ್ಸರ್ಜನ, ಸಮಾವರ್ತನ ಇವು ಬಹುಮಟ್ಟಿಗೆ ಹಿಂದೆ ಸರಿದಿವೆ. ಆದರೆ ಇವೆಲ್ಲ ಸಂಸ್ಕಾರಗಳ ಸ್ವಾರಸ್ಯವನ್ನಾದರೂ ಜನ ಅರಿತುಕೊಳ್ಳಬೇಕಾದ ಅಗತ್ಯವಿದೆ.

ಈ ಸಂದರ್ಭದಲ್ಲಿ ಕನ್ನಡನಾಡಿನ ವಿದ್ವತ್ ಪುರೋಹಿತ ವರ್ಗದ ಅಧ್ವರ್ಯುವೆನ್ನಬಹುದಾದ ಶ್ರೀ ಧಾಳಿನರಸಿಂಹಭಟ್ಟರು ಋಗ್ವೇದ ಪ್ರಯೋಗ ದೀಪಿಕೆಯಿಂದ ಸಂಗ್ರಾಹ್ಯವಾದ ಸಮಗ್ರವಾದ ಗ್ರಂಥವೊಂದನ್ನು ಸಿದ್ಧಪಡಿಸಿ ಆಸ್ತಿಕರಿಗೂ, ಆಸಕ್ತರಿಗೂ ವಿಶೇಷವಾದ ಕೊಡುಗೆಯನ್ನು ನೀಡಿರುವುದು ಅಭಿನಂದನಾರ್ಹವಾಗಿದೆ. ಲೇಖಕರು ಉದ್ದಾಮ ಪಂಡಿತರೂ ಸರ್ವಮಾನ್ಯರೂ ಕೀರ್ತಿಭಾಜನರೂ ಆಗಿದ್ದು ತಮ್ಮ ತೀರ್ಥರೂಪರ, ಬಳಿಯೇ ಈ ಕ್ಷೇತ್ರದಲ್ಲಿ ಸಾಂಗವಾದ ಅಧ್ಯಯನವನ್ನು ನಡೆಸಿ, ಪೂರ್ವಾಪರ ಪ್ರಯೋಗದಲ್ಲಿ ಪ್ರೌಢಶಿಕ್ಷಣವನ್ನೂ ಪಡೆದುಕೊಂಡು ಅಪಾರವಾದ ಅನುಭವವನ್ನು ಹೊಂದಿ ಈ ಪುಸ್ತಕವನ್ನು ರಚಿಸಿದ್ದಾರೆ. ಎಂದ ಮೇಲೆ ಪುಸ್ತಕದ ಪ್ರಾಮಾಣಿಕತೆ, ಪ್ರಾಮಾಣ್ಯ, ಪ್ರೌಢಿಮೆ, ಪ್ರಯೋಜನಗಳನ್ನು ಕುರಿತು ಬೇರೆ ಹೇಳಬೇಕಾದದುದೇನು? ಕನ್ನಡದಲ್ಲಿ ಇಷ್ಟು ಉಪಯುಕ್ತವಾದ, ನಿಶ್ಚಯಾತ್ಮಕವಾದ ಪ್ರಯೋಗ ಗ್ರಂಥ ಬೇರೊಂದು ಇರಲಿಲ್ಲ. ಅದರ ಕೊರತೆ ಇದ್ದಿತು, ಅದನ್ನು ನೀಗಿಸಿ ಶ್ರೀ ನರಸಿಂಹಭಟ್ಟರು ನಮಗೆಲ್ಲ ಉಪಕಾರ ಮಾಡಿದ್ದಾರೆ.

ಇದರಲ್ಲಿ ಪೂರ್ವಪ್ರಯೋಗ ಭಾಗವೇ ಇರುವುದು, ಅದಕ್ಕೆ ಸಂಬಂಧ ಸಂಸ್ಕಾರಗಳನ್ನು ಕುರಿತಂತೆ ವಿಧಿ, ಆಚರಣೆ, ಮಂತ್ರ, ತಂತ್ರ, ಎಲ್ಲವನ್ನೂ ಇಲ್ಲಿ ಕಾಣಬಹುದು, ಸಂಸ್ಕಾರ ಮಾತ್ರವಲ್ಲ ಅವುಗಳಿಗೆ ಅನುಗುಣವಾಗಿ ಪುಣ್ಯಾಹ ಪ್ರಯೋಗ, ನಾಂದೀ ಸ್ಥಾಪನೆ, ಅಗ್ನಿ ಮುಖ ಪ್ರಯೋಗ, ಗ್ರಹಯಜ್ಞ, ಮಹಾ ಸಂಕಲ್ಪ, ಚೂರ್ಣಿಕೆ, ಮುಂತಾದ ಕ್ರಿಯಾಕಲಾಪಗಳನ್ನು ಕುರಿತಂತೆಯೂ ಇಲ್ಲಿ ವಿವರಗಳಿವೆ. ವಿಧಿ ನಿಷೇಧಗಳ ಸೂಚನೆಯಿದೆ. ಅಶ್ವಲಾಯನ ಪೂರ್ವಪ್ರಯೋಗಗಳ ಸೋಪಾನ ಕಾರಿಕೆಗಳನ್ನು ಇಲ್ಲಿ ಅಳವಡಿಸಿರುವುದು ವಿಶೇಷವಾಗಿದೆ ಪುರೋಹಿತರಿಗೆ ಕೈಪಿಡಿಯಂತಿರುವ ಈ ಪುಸ್ತಕ ಶ್ರದ್ಧಾಳುವಾದ ಯಾರಿಗಾದರೂ ಸ್ವಾಗತಾರ್ಹವಾಗಿದೆ. ಪ್ರಸಕ್ತವಾದ ಮಂತ್ರಗಳನ್ನು ಕನ್ನಡ ಲಿಪಿಯಲ್ಲೇ ಕೊಟ್ಟು ಅಗತ್ಯವಿದ್ದೆಡೆ ಕನ್ನಡದಲ್ಲಿ ವಿವರಣಾತ್ಮಕವಾದ ಟಿಪ್ಪಣಿಗಳನ್ನು ಜೋಡಿಸಿದ್ದಾರೆ. ಪರಿಶಿಷ್ಟಗಳಾಗಿ ಸ್ನಾನವಿಧಿ, ಭೋಜನವಿಧಿ, ನಿತ್ಯಬ್ರಹ್ಮಯಜ್ಞ ಯಜ್ಞೋಪವೀತ ಧಾರಣವಿಧಿ, ದಾನಮಂತ್ರಗಳು ಇವನ್ನೂ ಸೇರಿಸಿದ್ದಾರೆ. ಆಸ್ತಿಕರಿಗೆ ಇವೆಲ್ಲ ಸಂಗ್ರಾಹ್ಯವಾದ ವಿವರಗಳು. ಇವಲ್ಲದೆ ನವಗ್ರಹಸ್ತೋತ್ರ, ಸೂರ್ಯನಮಸ್ಕಾರ, ನಕ್ಷತ್ರೇಷ್ಟಿ, ವಾಸ್ತುಶಾಂತಿಗಳ ಮಂತ್ರಗಳನ್ನು ಕೊಟ್ಟಿದ್ದಾರೆ ಎಲ್ಲರಿಗೂ ಮನದಟ್ಟಾಗುವಂತೆ ಪಂಚಾಂಗ ಶುದ್ಧಿಯೂ ಸೇರಿಕೊಂಡು ಬಂದಿದೆ. ಲೇಖಕರ ಕೊಡುಗೆ ಸ್ಮರಣೀಯವಾಗಿದೆ.

ಇಷ್ಟು ಸೊಗಸಾದ ಪುಸ್ತಕವನ್ನು ಅಷ್ಟೇ ಸೊಗಸಾಗಿ ಮುದ್ರಣ ಮಾಡಿ ಹೊರ ತಂದಿರುವ ನನ್ನ ಮಾನ್ಯ ಮಿತ್ರರು ಶ್ರೀ ವೈ. ವಿ. ಕೇಶವಮೂರ್ತಿಗಳವರ ಉಪಕಾರವನ್ನು ನಾವಿಲ್ಲಿ ನೆನೆಯಬೇಕು ಪ್ರಕಟಣೆಯು ಸಮಯೋಚಿತವಾಗಿಯೂ ಇದೆ. ಈಚೀಚೆಗೆ ಪುರೋಹಿತರ ಸಂಖ್ಯೆ ಕಡಿಮೆಯಾಗುತ್ತಿದೆ. ಪರಿಣಿತರಾದ ಪುರೋಹಿತರಂತೂ ದೊರಕುವುದೇ ಕಷ್ಟ ಆದರೆ ಆಸ್ತಿಕರಾದ ಮಹಾಜನರ ಸಂಖ್ಯೆ ಹೆಚ್ಚುತ್ತಿದೆ. ಸಂಸ್ಕಾರಗಳಲ್ಲಿ ಶ್ರದ್ಧೆ ಮತ್ತೆ ಬೆಳೆಯುತ್ತಿದೆ. ಹೀಗಿರುವಾಗ ಇಂಥದೊಂದು ಗ್ರಂಥ ಪುರೋಹಿತರ ನೆರವಿಗೂ ಬರುತ್ತದೆ. ಆಸ್ತಿಕ ಗೃಹಸ್ಥರಿಗೂ ತಿಳಿವಳಿಕೆಗೆ ಆಗುತ್ತದೆ. ಈ ಗ್ರಂಥದ ಲೇಖಕರಾದ ನರಸಿಂಹಭಟ್ಟರು ಅನುಭವಸ್ಥರು, ಪ್ರಯೋಗ ಕುಶಲರು, ಶಾಸ್ತ್ರ ಸಂಪನ್ನರು, ಸದಾಚಾರನಿರತರು ಇವರ ಈ ಪ್ರಯತ್ನ ಧರ್ಮಶ್ರದ್ಧೆಯಿಂದಲೂ ಲೋಕ ಸಂಗ್ರಹ ದೃಷ್ಟಿಯಿಂದಲೂ ಹೊರಹೊಮ್ಮಿದೆ.

ಪ್ರಕಾಶಕರ ಮನೋಧರ್ಮವೂ ಹೀಗೆಯೇ ಇರುವುದರಿಂದ ನಾಡಿನಲ್ಲಿ ಧರ್ಮಜಾಗೃತಿಯೇ ಉದ್ದೇಶವಾಗಿರುವ ಈ ಪ್ರಕಟಣೆಯಿಂದ ಆಸ್ತಿಕರಾದ ಎಲ್ಲರಿಗೂ ಒಳಿತಾಗಲಿ ಸಂಶಯಾತ್ಮರಲ್ಲಿ ಶ್ರದ್ಧೆಮೂಡಲಿ. ಎಂದು ಹಾರೈಸಿ ನನ್ನ ನಾಲ್ಕು ಮಾತನ್ನು ಮುಗಿಸುತ್ತೇನೆ.

ಸ. ಕೃ. ರಾಮಚಂದ್ರರಾವ್

ಸ. ಕೃ. ರಾಮಚಂದ್ರ ರಾವ್

ಓಂ

ಶ್ರೀಃ

ಶ್ರೀಗಣೇಶ ಶಾರದಾ ಲಕ್ಷ್ಮೀನೃಸಿಂಹ ಗುರುಭ್ಯೋನಮಃ

ಷೋಡಶ ಸಂಸ್ಕಾರಗಳಿಂದ ಸಂಸ್ಕೃತನಾದವನೇ ಶ್ರೋತ್ರೀಯ ಬ್ರಾಹ್ಮಣನೆನಿಸುವನು. ಅಂತ್ಯೇಷ್ಟಿಕರ್ಮವನ್ನು ಬಿಟ್ಟರೆ ಉಳಿದ 15 ಸಂಸ್ಕಾರಗಳೂ ಬ್ರಾಹ್ಮಣನಿಗೆ ನಿತ್ಯವಾದವುಗಳು. ''ಜನ್ಮನಾ ಬ್ರಾಹ್ಮಣೋಜ್ಞೇಯಃ ಸಂಸ್ಕಾರಾ ದ್ವಿಜ ಉಚ್ಯತೇ ವಿದ್ಯಯಾ ಯಾತಿ ವಿಪ್ರತ್ವಂ ತ್ರಿಭಿಃಶ್ರೋತ್ರೀಯ ಉಚ್ಯತೇ'', ಬ್ರಾಹ್ಮಣನಾಗಿ ಹುಟ್ಟಿ, ಜಾತಕರ್ಮಾದಿ ಸಂಸ್ಕಾರಗಳಿಂದ ಸಂಸ್ಕೃತನಾಗಿ ವೇದಾಧ್ಯಯನದಿಂದ ವಿಪ್ರನೆನಿಸಿ ಶ್ರೋತ್ರೀಯ ಬ್ರಾಹ್ಮಣ ನೆನಿಸಿಕೊಳ್ಳಬೇಕು. ಇಂತಹ ಬ್ರಾಹ್ಮಣನಿಗೆ ಬೇಕಾದ ಪುಣ್ಯಾಹಾದಿ ವಿವಾಹಾಂತ ಪ್ರಯೋಗವನ್ನು ಪುರೋಹಿತ ವರ್ಗಕ್ಕೆ ಸುಲಭವಾಗಿ ಅರ್ಥಮಾಡಿಕೊಂಡು ಕರ್ಮಗಳನ್ನು ನಡೆಸಲು ಅನುಕೂಲವಾಗುವಂತೆ ಕನ್ನಡಾನುವಾದ ಟಿಪ್ಪಣಿ ಸಹಿತ ನನಗೆ ತಿಳಿದ ಮಟ್ಟಿಗೂ ಬರೆದಿರುತ್ತೇನೆ. ಅಲ್ಲದೇ ಬ್ರಾಹ್ಮಣನಿಗೆ ಬೇಕಾದ ಇನ್ನೂ ಕೆಲವಾರು ಪ್ರಯೋಗಕ್ಕೆ ಸಂಬಂಧಪಟ್ಟ ವಿಷಯಗಳನ್ನೂ ಸೇರಿಸಿರುತ್ತೇನೆ.

ಈ ನನ್ನ ಗ್ರಂಥವನ್ನು ನೋಡಿ ಇದಕ್ಕೆ ಸಂಪೂರ್ಣವಾದ ಅನುಗ್ರಹವನ್ನು ದಯಪಾಲಿಸಿರುವ ಶ್ರೀ ಶ್ರೀ ಜಗದ್ಗುರು ಶ್ರೀ ಭಾರತೀ ತೀರ್ಥ ಮಹಾಸ್ವಾಮಿಗಳವರ ಚರಣಾರವಿಂದಗಳಲ್ಲಿ ''ಭೂಯೋಭೂಯೋ ನ ಮಾಮ್ಯಹಂ'', ಎಂಬಂತೆ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ ಮತ್ತು ಶ್ರೀ ಉಡುಪಿ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶ್ವರ ತೀರ್ಥ ಶ್ರೀಪಾದಂಗಳವರ ಮತ್ತು ಶ್ರೀಶ್ರೀರಂಗಪ್ರಿಯಮಹಾಸ್ವಾಮಿಗಳವರ ಚರಣಾರವಿಂದಗಳಲ್ಲಿಯೂ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ನನ್ನ ಗ್ರಂಥವನ್ನು ಪರಿಶೋಧಿಸಿದ ವಿದ್ವಾಂಸರಾದ ಪ್ರೊ. ಎಸ್. ಕೆ. ರಾಮಚಂದ್ರರಾಯರಿಗೂ ಮತ್ತು ಈ ಗ್ರಂಥದ ಮೂರನೇ ಮುದ್ರಣಕ್ಕೆ ಸಹಾಯಕರಾಗಿ ನಿಂತು ನನ್ನ ಈ ಗ್ರಂಥವನ್ನು ಮುದ್ರಣ ಮಾಡಿ ಪ್ರಕಟಿಸುತ್ತಿರುವ ಮೆ. ಪ್ರಜಾ ಪ್ರಿಂಟರ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರಾದಂತಹ ಶ್ರೀ ವೈ. ವಿ. ಕೇಶವಮೂರ್ತಿಗಳಿಗೆ ವೇದಪುರುಷನ ಅನುಗ್ರಹವು ಸಂಪೂರ್ಣವಾಗಿರಲೆಂದೂ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಬರವಣಿಗೆಯಲ್ಲಾಗಲೀ ಮುದ್ರಣದಲ್ಲಾಗಲೀ ಲೋಪ ದೋಷಗಳು ಕಂಡಲ್ಲಿ ಗ್ರಾಹಕರು ಹಂಸಕ್ಷೀರ ನ್ಯಾಯದಂತೆ ಗುಣಗ್ರಹಣ ಮಾಡಬೇಕೆಂದೂ ಪ್ರಾರ್ಥಿಸುತ್ತೇನೆ.

**ಪ್ರಮಾಥಿ ಸಂವತ್ಸರದ**
**ಅಧಿಕ ಜ್ಯೇಷ್ಠ**
**ಕೃಷ್ಣ ಏಕಾದಶೀ ಗುರುವಾರ**

**ಧಾಲಿ ಲಕ್ಷ್ಮೀನರಸಿಂಹಭಟ್ಟ**
**ರಾಷ್ಟ್ರ ರಾಜ್ಯಪ್ರಶಸ್ತಿ ವಿಜೇತ**
**ಋಗ್ವೇದ ಭೂಷಣ ವಿಶಾರದ**
**ವಿಚಕ್ಷಣ, ಇತ್ಯಾದಿ ಸನ್ಮಾನಿತ**

# ಪ್ರಕಾಶಕರ ನುಡಿ

ಕನ್ನಡ ನಾಡು ನುಡಿಗಳ ಸೇವೆಯಲ್ಲಿ ನಮ್ಮನ್ನು ನಾವು ತೊಡಗಿಸಿಕೊಂಡು ಈಗಾಗಲೇ 19ವರ್ಷಗಳು ಸಂದು 20ನೇ ವರ್ಷಕ್ಕೆ ಪದಾರ್ಪಣೆ ಮಾಡುತ್ತಿದ್ದೇವೆ. ಬದುಕು ಮತ್ತು ಸಂಸ್ಕೃತಿಗಳ ಹಿರಿಮೆಯನ್ನು ಎತ್ತಿಹಿಡಿದು ಬಾಳನ್ನು ಹಸನಾಗಿಸಬಲ್ಲ ಶುದ್ಧಗೊಳಿಸಬಲ್ಲ ಸಂಸ್ಕರಿಸಬಲ್ಲ ಜ್ಞಾನಪ್ರಸಾರದ ಕಾರ್ಯದಲ್ಲಿ ಪುಸ್ತಕಗಳ ಪ್ರಕಟಣೆಯೂ ಅತ್ಯಂತ ಮಹತ್ವಕರ ಪಾತ್ರವಹಿಸುತ್ತದೆ.

ಇದೀಗ ನಮ್ಮ ಪ್ರಕಾಶನದ ಎಂಟನೇ ಕುಸುಮವಾಗಿ ರಾಷ್ಟ್ರ ಹಾಗೂ ರಾಜ್ಯ ಸರ್ಕಾರ ಪ್ರಶಸ್ತಿ ವಿಜೇತರಾದ ವಿದ್ಯಾ ಸಾಗರ ಋಗ್ವೇದ ರತ್ನ ಋಗ್ವೇದ ಭೂಷಣ ವೇದ ಬ್ರಹ್ಮಶ್ರೀ ಧಾಳಿ ಲಕ್ಷ್ಮೀ ನರಸಿಂಹಭಟ್ಟರವರ ''ಋಗ್ವೇದ ಪ್ರಯೋಗ ದೀಪಿಕಾ'' ಎಂಬ ಗ್ರಂಥವನ್ನು ಹೊರತರುತ್ತಿದ್ದೇವೆ. ಹುಟ್ಟು ಮತ್ತು ಅಂತ್ಯದ ನಡುವೆ ಅಂತ್ಯೇಷ್ಟಿಯೊಂದನ್ನು ಬಿಟ್ಟು ನಡೆಯಬೇಕಾದ ಎಲ್ಲ ವೈದಿಕ ಕರ್ಮಗಳನ್ನೊಳಗೊಂಡ ಈ ಗ್ರಂಥವು ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಫಲಗಳನ್ನು ನೀಡಬಲ್ಲ ಕಲ್ಪವೃಕ್ಷವಾಗಿರುತ್ತದೆ ಶುದ್ಧಸು ಸಂಸ್ಕೃತ ಸಮಾಜದ ಬುನಾದಿಗೆ ಈ ಗ್ರಂಥ ಅಡಿಗಲ್ಲಾಗಿರುತ್ತದೆ.

ಈ ಗ್ರಂಥಕ್ಕೆ ಸಂಪೂರ್ಣವಾದ ಅನುಗ್ರಹವನ್ನು ದಯಪಾಲಿಸಿರುವ ಶ್ರೀ ಶ್ರೀ ಜಗದ್ಗುರು ಶ್ರೀ ಭಾರತೀ ತೀರ್ಥಮಹಾಸ್ವಾಮಿಗಳವರ ಚರಣಾರವಿಂದದಲ್ಲಿ ಸಹಸ್ರ ಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ ಮತ್ತು ಉಡುಪಿ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶ್ವರ ತೀರ್ಥ ಶ್ರೀ ಪಾದಂಗಳವರಿಗೂ ಮತ್ತು ಶ್ರೀ ಶ್ರೀ ರಂಗಪ್ರಿಯ ಮಹಾಸ್ವಾಮಿಗಳ ಚರಣಾರವಿಂದಗಳಲ್ಲಿಯೂ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಈ ಗ್ರಂಥವನ್ನು ಪರಿಶೋಧಿಸಿದ ಮತ್ತು ಮುನ್ನುಡಿಯನ್ನು ಬರೆದುಕೊಟ್ಟ ವಿದ್ಯಾಲಂಕಾರ ಶಾಸ್ತ್ರಚೂಡಾಮಣಿ ಪ್ರೊ. ಎಸ್. ಕೆ. ರಾಮಚಂದ್ರ ರಾಯರಿಗೂ ನಾನು ಆಭಾರಿಯಾಗಿರುತ್ತೇನೆ ಮತ್ತು ನನ್ನ ಅನಂತ ನಮಸ್ಕಾರಗಳು - ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ದಾಗಿ ಮುದ್ರಿಸಿಕೊಟ್ಟ ಶ್ರೀರಂಗ ಪ್ರಿಂಟರ್ಸ್‌ರವರಿಗೂ ನನ್ನ ವಂದನೆಗಳು.

ಪ್ರಮಾಧಿ ಸಂವತ್ಸರದ
ಆಷಾಡ ಶುದ್ಧ ಏಕಾದಶಿ
ಭಾನುವಾರ 22-7-99

ಎಲ್ಲರಿಗೂ ಶುಭಹಾರೈಕೆಯೊಡನೆ
**ವೈ. ಎ. ಕೇಶವಮೂರ್ತಿ**

# ಪರಿವಿಡಿ

# ಪರಿಶಿಷ್ಟ

| ಶೀರ್ಷಿಕೆ | | ಪುಟ |
|---|---|---|

ವಿಘ್ನೇಶ ವೀರ್ಯಾಣಿ ವಿಚಿತ್ರಕಾಣಿ ವಂದೀ ಜನೈರ್ಮಾಗಧಕೈಃ ಸ್ಮೃತಾನಿ ।
ಶ್ರುತ್ವಾ ಸಮುತ್ತಿಷ್ಠ ಗಜಾನನ ತ್ವಂ ಬ್ರಾಹ್ಮೇ ಜಗನ್ಮಂಗಳಕಂ ಕುರುಷ್ವ ॥

## ಶ್ರೀಗಣೇಶಾಯನಮಃ
## ಶ್ರೀ ಶಾರದಾ ನೃಸಿಂಹ ಗುರುಭ್ಯೋ ನಮಃ

## ಪುಣ್ಯಾಹ ಪ್ರಯೋಗಃ

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಂಽಘ್ರಿಯುಗಂ ಸ್ಮರಾಮಿ ॥

ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ ।
ಸಾನೋ ಮಂದ್ರೇಷ ಮೂರ್ಜಂ ದುಹಾನಾ ಧೇನುರ್ವಾಗಸ್ಮಾನುಪಸುಷ್ಟುತೈತು ॥
ಧ್ರುವಂ ತೇ ರಾಜಾ ವರುಣೋ ಧ್ರುವಂ ದೇವೋ ಬೃಹಸ್ಪತಿಃ ।
ಧ್ರುವಂ ತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂ ಧಾರಯತಾಂ ಧ್ರುವಂ ॥

॥ ಸುಮುಹೂರ್ತೋಽಸ್ತು ಸುಪ್ರತಿಷ್ಠಿತಮಸ್ತು ॥

---

ಯಾವುದೇ ಮಂಗಳ ಕಾರ್ಯವನ್ನು ಪ್ರಾರಂಭಿಸುವಾಗಲೂ ಸಮಸ್ತ ವಿಘ್ನಗಳೂ ಪರಿಹಾರವಾಗಿ ಸುಗಮವಾಗಿ ಕಾರ್ಯವು ನಡೆಯುವುದಕ್ಕೋಸ್ಕರ ಆರಂಭದಲ್ಲಿ ಶ್ರೀಮಹಾಗಣಪತಿಯನ್ನು ಪೂಜಿಸಬೇಕು.

ಯಜಮಾನನು ಸಪತ್ನೀಕನಾಗಿಯೂ, ಸಂಸ್ಕಾರಿಸಹಿತನಾಗಿಯೂ ಮಂಗಳ ಸ್ನಾನಮಾಡಿ ಅಲಂಕೃತನಾಗಿ ತನ್ನ ನಿತ್ಯಕರ್ಮವನ್ನು ಮುಗಿಸಿದ ನಂತರ ತಾನು ಮುಂದೆ ಮಾಡುವ ಕರ್ಮಭಾಗಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ರಂಗವಲ್ಯಾದಿಗಳಿಂದ ಅಲಂಕೃತವಾದ ಆಸನದಲ್ಲಿ ತನ್ನ ಪತ್ನಿ ಮತ್ತು

**ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ। ಯಜಾಮ ದೇವಾನ್, ಯದಿ ಶಕ್ನವಾಮ ಮಾ ಜ್ಯಾಯಸಶ್ಶಂಸ ಮಾ ವೃಕ್ಷಿ ದೇವಾಃ ।**

ಸುಮುಹೂರ್ತೋಽಸ್ತ್ವಿತಿ ಭವಂತೋ ಬ್ರುವಂತು ॥ ಸುಮುಹೂರ್ತೋಽಸ್ತು ॥

ಅಥ ಹೇಮಾದ್ರೌ ದಾನಕಾಂಡೇ ಬಹ್ವೃಚಗೃಹ್ಯಪರಿಶಿಷ್ಟೋಕ್ತಸಕಲ ಕರ್ಮಸಾಧಾರಣ ಶಿಷ್ಟಾಚಾರಪರಿಪ್ರಾಪ್ತಪುಣ್ಯಾಹವಾಚನವಿಧಿರಭಿಧೀಯತೇ ॥

ಯಜಮಾನಃ ಕೃತಾಭ್ಯಂಗಾದಿಕ್ರಿಯಃ ಸ್ವಲಂಕೃತೋ ದರ್ಭಪಾಣಿಶ್ಶುಚಿರ್ಭೂತ್ವಾ ಮಂಗಳ ಸಂಭಾರಾನ್ ಸಂಭೃತ್ಯ ಸ್ವಲಂಕೃತೇಗೃಹೇಸೋತ್ತರಚ್ಛದೇ ಭದ್ರಾಸನೇ ಪ್ರಾಙ್ಮುಖ ಉಪವಿಶ್ಯ, ಪತ್ನೀಮುಪವೇಶ್ಯ, ಸಂಸ್ಕಾರ್ಯಾನಪ್ಯುಪವೇಶ್ಯ ಮನಸೀಷ್ಟದೇವತಾಂ ಧ್ಯಾತ್ವಾ

ಪ್ರಾರೀಪ್ಸಿತಸ್ಯ ಕರ್ಮಣಃ ನಿರ್ವಿಘ್ನೇನ ಉತ್ತರೋತ್ತರಾಭಿವೃದ್ಧ್ಯರ್ಥಂ ಆದೌ ಶ್ರೀಮಹಾಗಣಪತಿ ಪೂಜಾಂ ಕರಿಷ್ಯೇ ಇತಿ ಸಂಕಲ್ಪ್ಯ ॥

ಓಂ ॥ ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।  
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥  
ಧೂಮಕೇತುರ್ಗಣಾಧ್ಯಕ್ಷಃ ಫಾಲಚಂದ್ರೋ ಗಜಾನನಃ ।  
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥  
ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।  
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥  
ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।

---

ಸಂಸ್ಕಾರಿಯನ್ನು ತನ್ನ ಬಲ ಭಾಗದಲ್ಲಿ ಕುಳ್ಳಿರಿಸಿಕೊಂಡು ತಾನು ಆಚಮನ ಮಾಡಿ ಪವಿತ್ರವನ್ನು ಧರಿಸಬೇಕು.

ತನ್ನ ಇಷ್ಟದೇವತೆ, ಕುಲದೇವತೆ ಮತ್ತು ಗುರುಹಿರಿಯರಿಗೂ ನಮಸ್ಕರಿಸಿ ಆಸನದಲ್ಲಿ ಕುಳಿತು ಶ್ರೀ ಮಹಾಗಣಪತಿಯನ್ನು ಆವಹನಾದಿಗಳಿಂದ ಅರ್ಚಿಸಿ ಭಕ್ತಿಯಿಂದ ಪ್ರಾರ್ಥಿಸಿ ಮುಂದಿನ ಪುಣ್ಯಾಹ ಕರ್ಮವನ್ನು ಆರಂಭಿಸಬೇಕು.

'ಪುಣ್ಯಂ ಅಹಃ ಪುಣ್ಯಾಹಃ' ಎಂದರೆ ''ಪುಣ್ಯವನ್ನುಂಟು ಮಾಡುವ ಮಂಗಳದಿನವಾಗಲಿ'' ಎಂಬ ಉದ್ದೇಶದಿಂದ ಬ್ರಾಹ್ಮಣರು ಕೊಟ್ಟ ಆಶೀರ್ವಾದ, ಕರ್ಮವನ್ನು ಮಾಡುವ ಯಜಮಾನನಿಗೂ,

ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥

ಅಭೀಪ್ಸಿತಾರ್ಥಸಿಧ್ಯರ್ಥಂ ಪೂಜಿತೋಯಸ್ಸುರೈರಪಿ ।

ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥

ಗಣಾನಾಂತ್ವಾ ಗೃತ್ಸಮದೋ ಗಣಪತಿರ್ಜಗತೀ, ಗಣಪತ್ಯಾವಾಹನೇ ವಿನಿಯೋಗಃ ॥

ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ ।

ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶ್ಶೃಣ್ವನ್ನೂತಿಭಿಸ್ಸೀದ ಸಾದನಂ ॥

ಅಸ್ಮಿನ್ಮಂಡಲೇ ಭೂಃ ಗಣಪತಿ ಮಾವಾಹಯಾಮಿ । ಭುವಃ ಗಣಪತಿಮಾವಾಹಯಾಮಿ । ಸ್ವಃ ಗಣಪತಿಮಾವಾಹಯಾಮಿ । ಭೂರ್ಭುವಸ್ವಃ ಗಣಪತಿಮಾವಾಹಯಾಮಿ । ಮಹಾಗಣಪತಯೇ ನಮಃ ಧ್ಯಾನಾವಾಹನಾದಿ ಷೋಡಶೋಪಚಾರೈಸ್ಸಂಪೂಜ್ಯ ॥

ವಕ್ರತುಂಡ ಮಹಾಕಾಯ ಕೋಟಿ ಸೂರ್ಯಸಮಪ್ರಭ ।

ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಮನಸಾಭೀಷ್ಟ ಪ್ರಾರ್ಥನಾಂ ಸಮರ್ಪಯಾಮಿ ॥ ಅನಯಾ ಪೂಜಯಾ ಶ್ರೀಮಹಾಗಣಪತಿಸ್ಸುಪ್ರೀತಸ್ಸುಪ್ರಸನ್ನೋ ವರದೋ ಭವತು ॥

ತತೋ ಗೋಮಯಾನುಲಿಪ್ತೇ ರಂಗವಲ್ಲಿಕಯಾಽನುರಂಜಿತೇ ಭೂತಲೇ ಕರ್ತಾ ಸ್ವಪುರತೋ ಮಹೀದ್ಯೌರಿತಿ ಮಂತ್ರೇಣ ದಕ್ಷಿಣೋತ್ತರಂ ಪ್ರತ್ಯೇಕಂ ಭೂಮಿಮಭಿಮಂತ್ರ್ಯ

ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಂ ।

ಪಿಪೃತಾಂ ನೋ ಭರೀಮಭಿಃ ॥

---

ಕರ್ಮವನ್ನು ಮಾಡಿಸಿಕೊಳ್ಳುವ ಕರ್ತೃವಿಗೂ 'ಈ ದಿನ ಪುಣ್ಯಪ್ರದವಾಗಲಿ' ಎಂದು ಸಮಸ್ತಶುಭಕರ್ಮಗಳ ಪ್ರಾರಂಭದಲ್ಲಿಯೂ ಅವಶ್ಯವಾಗಿ ಈ ಪುಣ್ಯಾಹವನ್ನು ಆಚರಿಸಲೇಬೇಕು.

ಶುಭಕರ್ಮಗಳು, ಧರ್ಮಕಾರ್ಯಗಳು, ಯುದ್ಧ, ಅತಿಶಯವಾದ ವಿಷಯಗಳ ನೋಟ, ಮುಂತಾದ ಸಂದರ್ಭಗಳಲ್ಲಿ ಬ್ರಾಹ್ಮಣರನ್ನು ಗಂಧಮಾಲ್ಯಾದಿಗಳಿಂದ ಸತ್ಕರಿಸಿ ಅವರಿಂದ ಸ್ವಸ್ತಿಯುಕ್ತವಾದ ಆಶೀರ್ವಚನಗಳನ್ನು ಮಾಡಿಸಿಕೊಳ್ಳಬೇಕು.

ಓಷಧಯಸ್ಸಮಿತಿ ಮಂತ್ರಾವೃತ್ಯಾ ಪರ್ಣದ್ವಯ ಮಾಸ್ತೀರ್ಯ,

ಓಷಧಯಸ್ಸಂ ವದಂತೇ ಸೋಮೇನ ಸಹ ರಾಜ್ಞಾ ।
ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ಪಾರಯಾಮಸಿ ॥

ಪ್ರಸ್ಥಪರಿಮಿತಧಾನ್ಯಸ್ಯ ಯಥಾಶಕ್ತ್ಯಾಹೃತಸ್ಯ ವಾ ಯೇನ ತೋಕಾಯೇತಿ ಮಂತ್ರೇಣ

ಯೇನ ತೋಕಾಯ ತನಯಾಯ ಧಾನ್ಯ ೧ ೦ ಬೀಜಂ ವಹಧ್ವೇ ಅಕ್ಷಿತಂ ।
ಅಸ್ಮಭ್ಯಂ ತದ್ಧತ್ತನಯದ್ವ ಈಮಹೇ ರಾಧೋ ವಿಶ್ವಾಯು ಸೌಭಗಂ ॥

ತತ್ರೋದಗಪವರ್ಗೌ ದ್ವೌ ಪುಂಜೌ ಕೃತ್ವಾ ತಯೋರುಪರಿ ಸೌವರ್ಣರಜತ ತಾಮ್ರಮೃಣ್ಮಯಾದ್ಯನ್ಯತಮಕಲಶಾವುಕ್ತಲಕ್ಷಣಲಕ್ಷಿತೌ, ಅವ್ರಣೌಮನೋಹರೌ ಸುಶುದ್ಧೌ, ಚಂದನಕುಂಕುಮಾದಿನಾಽನುಲಿಪ್ತೌ ತಂತುನಾಽಽವೇಷ್ಟಿತೌ, ಸಪಲ್ಲವಮುಖೌ ದಕ್ಷಿಣೋತ್ತರಯೋರಾಕಲಶೇಷ್ವಿತಿ ಮಂತ್ರಾವೃತ್ಯಾ ನಿಧಾಯ,

ಆಕಲಶೇಷು ಧಾವತಿ ಶ್ಯೇನೋ ವರ್ಮವಿಗಾಹತೇ । ಅಭಿದ್ರೋಣಾ ಕನಿಕ್ರದತ್ ॥

ಇಮಂ ಮೇ ಗಂಗೇ ಇತಿ ಪುಣ್ಯತೀರ್ಥ ಜಲೇನಾಪೂರ್ಯ,

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ ।
ಅ ಸಿಕ್ನ್ಯಾ ಮರುಧೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

---

ಶುಭಕಾರ್ಯದಲ್ಲಿ ಮಾಡುವ ಪುಣ್ಯಾಹಕ್ರಮದಲ್ಲಿ ಎರಡು ಕಲಶಗಳನ್ನೂ, ಅಶುಭದಲ್ಲಿ ಒಂದು ಕಲಶವನ್ನೂ ಇಡಬೇಕು. ಚಿನ್ನ, ಬೆಳ್ಳಿ, ತಾಮ್ರ ಅಥವಾ ಮಣ್ಣಿನ ಲಕ್ಷಣವಾದ ಪಾತ್ರೆಗಳನ್ನಿಡಬೇಕು.

ಕಲಶಗಳಲ್ಲಿ ಪಂಚರತ್ನ ಅಥವಾ ಸುವರ್ಣವನ್ನು ಹಾಕಬೇಕು.

ಅತ್ತಿ, ಆಲ, ನೇರಳೆ, ಮಾವು, ಅರಳಿಮರಗಳ ಸಿಪ್ಪೆ ಮತ್ತು ಚಿಗುರುಗಳನ್ನು ಕಲಶಗಳಲ್ಲಿ ಹಾಕಬೇಕು. ಮೊದಲು ''ಮಹೀ ದ್ಯೌಃ'' ಎಂಬ ಮಂತ್ರದಿಂದ ಭೂಮಿಯನ್ನು ಪ್ರಾರ್ಥಿಸಿ ನಂತರ ಎರಡು

ಗಂಧದ್ವಾರಾಮಿತಿ ಗಂಧಂ ಪ್ರಕ್ಷಿಪ್ಯ,

**ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ।**

**ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥**

ಸ ಹಿ ರತ್ನಾನೀತಿ ಪಂಚರತ್ನಾನಿ ನಿಕ್ಷಿಪ್ಯ,

**ಸ ಹಿ ರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ । ತಂ ಭಾಗಂ ಚಿತ್ರಮೀಮಹೇ ॥**

ಸಿತತಂಡುಲಪೂರಿತಪಾತ್ರಾಭ್ಯಾಂ ಸಫಲಾಭ್ಯಾಂ ಪೂರ್ಣಾದರ್ವೀತಿ ಮಂತ್ರೇಣ,

**ಪೂರ್ಣಾ ದರ್ವಿಪರಾ ಪತ ಸುಪೂರ್ಣಾ ಪುನರಾಪತ ।**

**ವಸ್ನೇವ ವಿಕ್ರೀಣಾವಹಾ ಇಷಮೂರ್ಜಂ ಶತಕ್ರತೋ ॥**

ತಯೋರಾನನೇ ಅಪಿಧಾಯ, ಪುಷ್ಪಮಾಲಾದಿಭೂಷಿತೌ ಕೃತ್ವಾ, ಸರ್ವತ್ರೋತ್ತರ ಸಂಸ್ಥಾಂ ಮಂತ್ರಾವೃತ್ತಿಂ ಚ ಕ್ರಮೇಣ ಕುರ್ಯಾತ್ ॥

ತತ್ವಾಯಾಮೀತ್ಯಸ್ಯ ಶುನಶ್ಶೇಪೋ ವರುಣಸ್ತ್ರಿಷ್ಟುಪ್, ಕಲಶಯೋಃ ವರುಣಾವಾಹನೇ ವಿನಿಯೋಗಃ :-

**ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ ।**

---

ಎಲೆಗಳನ್ನು 'ಓಷಧಯ ಸ್ಸಂ' ಎಂಬ ಮಂತ್ರದಿಂದ ಹರಡಿ, ಅದರ ಮೇಲೆ ''ಯೇನ ತೋಕಾಯ'' ಎಂಬ ಮಂತ್ರದಿಂದ ಪ್ರಸ್ಥ ಎಂದರೆ ನಾಲ್ಕು ಸೇರಕ್ಕಿಯನ್ನು ಹಾಕಿ ಅದರ ಮೇಲೆ ''ಆಕಲಶೇಷು'' ಎಂಬ ಮಂತ್ರದಿಂದ ಕಲಶದ್ವಯಗಳನ್ನು ಸ್ಥಾಪಿಸಬೇಕು. ''ಇಮಂ ಮೇ ಗಂಗೇ'' ಎಂಬ ಮಂತ್ರದಿಂದ ಕಲಶಗಳಿಗೆ ನೀರನ್ನು ಹಾಕಿ ''ಗಂಧದ್ವಾರಾಂ'' ಎಂಬ ಮಂತ್ರದಿಂದ ಗಂಧವನ್ನೂ ''ಸಹಿರತ್ನಾನಿ'' ಎಂಬ ಮಂತ್ರದಿಂದ ಪಂಚರತ್ನಗಳನ್ನೂ ಹಾಕಬೇಕು. ನಂತರ ''ಪೂರ್ಣಾದರ್ವಿ'' ಎಂಬ ಮಂತ್ರದಿಂದ ತೆಂಗಿನಕಾಯನ್ನು ಇಡಬೇಕು.

ಆಮೇಲೆ ''ತತ್ವಾಯಾಮಿ'' ಎಂಬ ಮಂತ್ರವನ್ನು ಹೇಳಿ ''ವರುಣಾಯ ನಮಃ'' ಎಂಬ

॥ । ॥

**ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರಮೋಷೀಃ ॥**

ವರುಣಾಯನಮಃ ಇತಿ ಷೋಡಶೋಪಚಾರೈಸ್ಸಂಪೂಜ್ಯ

ಸರ್ವೇಷು ಕಾಲೇಷು ಸಮಸ್ತ ದೇಶೇಷ್ವಶೇಷ ಕಾರ್ಯೇಷುತಥೇಶ್ವರೇಶ್ವರಃ ।
ಸರ್ವಸ್ವರೂಪೀ ಭಗವಾನನಾದಿಮಾನ್ಮಮಾಸ್ತು ಮಾಂಗಲ್ಯ ವಿವೃದ್ಧಯೇ ಹರಿಃ ॥
ಯತ್ರ ಯೋಗೇಶ್ವರ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥
ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥
ಸರ್ವೇಷ್ವಾರಬ್ಧಕಾರ್ಯೇಷುತ್ರಯಸ್ತ್ರಿಭುವನೇಶ್ವರಾಃ ।
ದೇವಾ ದಿಶಂತು ಮೇ ಸಿದ್ಧಿಂ ಬ್ರಹ್ಮೇಶಾನ ಜನಾರ್ದನಾಃ ॥
ಸ್ಮೃತೇ ಸಕಲ ಕಲ್ಯಾಣ ಭಾಜನಂ ಯತ್ರ ಜಾಯತೇ ।
ಪುರುಷಸ್ತಮಜಂ ನಿತ್ಯಂ ವ್ರಜಾಮಿ ಶರಣಂಹರಿಂ ॥
ಸರ್ವಮಂಗಳ ಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತುತೇ ॥
ತದೇವಲಗ್ನಂ-----ಸ್ಮರಾಮಿ ॥

ಕಲಶಯೋಃ, ಲಕ್ಷ್ಮೀನಾರಾಯಣಾಭ್ಯಾಂ ನಮಃ । ಉಮಾಮಹೇಶ್ವರಾಭ್ಯಾಂ ನಮಃ । ವಾಣೀಹಿರಣ್ಯಗರ್ಭಾಭ್ಯಾಂ ನಮಃ । ಶಚೀಪುರಂದರಾಭ್ಯಾಂ ನಮಃ । ಅರುಂಧತೀ ವಸಿಷ್ಠಾಭ್ಯಾಂ ನಮಃ । ಸೀತಾರಾಮಾಭ್ಯಾಂ ನಮಃ । ಸ್ವಾಹಾವೈಶ್ವಾನರಾಭ್ಯಾಂ ನಮಃ । ದುರ್ಗಾಯೈ ನಮಃ

---

ಮಂತ್ರದಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಕಲಶದ್ವಯಗಳನ್ನು ಮುಟ್ಟಿಕೊಂಡು ''ಸರ್ವೇಷುಕಾಲೇಷು'' ಎಂಬ ಮಂತ್ರವನ್ನೂ ''ಯತ್ರ ಯೋಗೇಶ್ವರಃ ಕೃಷ್ಣಃ--- ನಮೋಸ್ತುತೇ'' ಎಂಬ ಮಂತ್ರಗಳನ್ನೂ ಪಠಿಸಬೇಕು.

ಪುನಃ ಕಲಶಗಳಲ್ಲಿ ಲಕ್ಷ್ಮೀನಾರಾಯಣರು, ಉಮಾಮಹೇಶ್ವರರು, ವಾಣೀಹಿರಣ್ಯಗರ್ಭರು, ಶಚೀಪುರಂದರರು, ಆರುಂಧತೀವಸಿಷ್ಠರು, ಸೀತಾರಾಮರು, ಸ್ವಾಹಾ ವೈಶ್ವಾನರರು, ದುರ್ಗಾ, ಗಣಪತಿ, ಕ್ಷೇತ್ರಪಾಲ, ವಾಸ್ತುಪುರುಷ ಇವರನ್ನೆಲ್ಲಾ ಆವಾಹನೆ ಮಾಡಬೇಕು. ಮಾತಾ ಪಿತೃಗಳು ಗುರು ಹಿರಿಯರುಗಳನ್ನೆಲ್ಲಾ ನಮಸ್ಕರಿಸಿ, ಇದು ಸುಮುಹೂರ್ತವೆಂದು ಪ್ರಾರ್ಥಿಸಿದರೆ, ಸುಮುಹೂರ್ತವೆಂದು

। ಗಣಪತಯೇ ನಮಃ । ಕ್ಷೇತ್ರಪಾಲಕಾಯ ನಮಃ । ವಾಸ್ತು ಪುರುಷಾಯ ನಮಃ । ಮಾತೃಭ್ಯೋ ನಮಃ । ಪಿತೃಭ್ಯೋ ನಮಃ । ಗುರುಭ್ಯೋ ನಮಃ । ಆಚಾರ್ಯೇಭ್ಯೋ ನಮಃ । ಇಷ್ಟದೇವತಾಭ್ಯೋ ನಮಃ । ಕುಲದೇವತಾಭ್ಯೋ ನಮಃ । ಗ್ರಾಮಾಧಿದೇವತಾಭ್ಯೋ ನಮಃ । ಸರ್ವೇಭ್ಯೋ ಮಹಾಜನೇಭ್ಯೋ ನಮಃ । ಇತ್ಯುಕ್ತ್ವಾ ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ ಅಮುಕಕರ್ಮಣಃಕರ್ತುಂ ಆದೌಶುದ್ಧ್ಯರ್ಥ್ಯಭ್ಯುದಯ ಸಿದ್ಧಿದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ವ್ರತನಿಯಮತಪಸ್ಸ್ವಾಧ್ಯಾಯಕ್ರತುದಮದಾನ ವಿಶಿಷ್ಟೈರ್ಬ್ರಾಹ್ಮಣೈಸ್ಸಹ ಸ್ವಸ್ತಿಪುಣ್ಯಾಹವಾಚನಂ ಕರಿಷ್ಯೇ । ಪುಣ್ಯಾಹಾಙ್ಗಂ ಚತುರೋಬ್ರಾಹ್ಮಣಾನ್ಪೋಷಯಿಷ್ಯೇ ॥

ತತಃ ಉಕ್ತಲಕ್ಷಣ ಲಕ್ಷಿತಾನ್ ಪ್ರಶಸ್ತಾನ್ ಪ್ರತಿವಚನಸಮರ್ಥಾನ್ತದ್ದಿವಸೇ ಪೈತೃಕಾದಿಷ್ವಭುಕ್ತವತೋ ಯತ್ರಕುತ್ರಾಪ್ಯನಿಷಿದ್ಧಪ್ರತಿಗೃಹೀತೄನ್ ಶುಚೀಂಸ್ತ್ಪೋತ್ತರೀಯಾನ್ ದರ್ಭಪವಿತ್ರಪಾಣೀನ್ಯುಗ್ಮಾನ್ಬ್ರಾಹ್ಮಣಾನ್ಪ್ರಾಙ್ಮುಖಾನುದಙ್ಮುಖಾನ್ಪೋಪವೇಶ್ಯ

ತಾನ್‌ಗಂಧಪುಷ್ಪಾಕ್ಷತಾದಿಭಿರಭ್ಯರ್ಚ್ಯ, ತಾಂಬೂಲದಕ್ಷಿಣಾದಿಭಿರುಪತೋಷ್ಯ, ಓಂ ಆಪಃ। ಶಿವಾ ಆಪಸ್ಸಂತು । ಸೌಮನಸ್ಯಮಸ್ತು । ಅಕ್ಷತಂ ಚಾರಿಷ್ಟಂಚಾಸ್ತು । ಗಂಧಾಃ ಪಾಂತು । ಸೌಮಂಗಲ್ಯಂಚಾಸ್ತು । ಅಕ್ಷತಾಃ ಪಾಂತು । ಆಯುಷ್ಯಮಸ್ತು । ಪುಷ್ಪಾಣಿ ಪಾಂತು । ಸೌಶ್ರಿಯಮಸ್ತು । ತಾಂಬೂಲಾನಿ ಪಾಂತು । ಐಶ್ವರ್ಯಮಸ್ತು । ದಕ್ಷಿಣಾಃ ಪಾಂತು । ಬಹುದೇಯಂಚಾಸ್ತು । ದೀರ್ಘಮಾಯುಶ್ಶಾಂತಿಃಪುಷ್ಟಿಸ್ತುಷ್ಟಿಶ್ಚಾಸ್ತು । ಅಸ್ತ್ವಿತಿ ಬ್ರಾಹ್ಮಣಾಸ್ಸರ್ವತ್ರಬ್ರೂಯುಃ ॥

ಯಂ ಕೃತ್ವಾಸರ್ವವೇದಯಜ್ಞಕ್ರಿಯಾಕರಣಕರ್ಮಾರಂಭಾಶ್ಶುಭಾಶ್ಶೋಭನಾಃ ಪ್ರವರ್ತಂತೇ ತಮಹಮೋಂಕಾರಮಾದಿಂ ಕೃತ್ವಾ, ಭವದ್ಭಿರನುಜ್ಞಾತಃ ಪುಣ್ಯಂ ಪುಣ್ಯಾಹಂ ವಾಚಯಿಷ್ಯೇ ।

ವಾಚ್ಯತಾಮಿತಿ ಬ್ರಾಹ್ಮಣಾಃ ಪ್ರತಿಬ್ರೂಯುಃ ॥

ತತಃ ಕರ್ತಾ ಸರ್ವೈಸ್ಸಹ ಭದ್ರಂ ಕರ್ಣೇಭಿರ್ದ್ರವಿಣೋದಾಃ ಸವಿತಾಪಶ್ಚಾತಾನ್ನವೋನವೋ ಭವತೀತ್ಯಾದಿ ವದೇತ್ ॥

ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।

---

ಬ್ರಾಹ್ಮಣರು ಹೇಳುತ್ತಾರೆ.

ಭದ್ರಂ ಕರ್ಣೇಭಿಃ, ದ್ರವಿಣೋದಾಃ, ಸವಿತಾ ಪಶ್ಚಾತಾತ್, ನವೋನವೋ ಭವತಿ, ಆಪಉಂದಂತು, ಯಸ್ಮಾತ್ಹೃದಾ, ಸಂತ್ವಾಸಿಂಚಾಮಿ ಇತ್ಯಾದಿ ಮಂತ್ರಗಳನ್ನು ಪಠಿಸಿ ಯಜಮಾನನು ''ಮನಸ್ಸಮಾಧೀಯತಾಂ'' ಎಂದು ಹೇಳಬೇಕು. ಬ್ರಾಹ್ಮಣರು ''ಸಮಾಹಿತಮನಸಸ್ಸ್ಮಃ'' ಎಂದು ಹೇಳುತ್ತಾರೆ.

''ಪ್ರಸೀದಂತು ಭವಂತಃ'' ಎಂದು ಯಜಮಾನನ ಪ್ರಾರ್ಥನೆಗೆ ''ಪ್ರಸನ್ನಾಸ್ಸ್ಮಃ'' ಎಂದು

ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥

ದ್ರವಿಣೋದಾದ್ರವಿಣಸಸ್ತುರಸ್ಯ ದ್ರವಿಣೋದಾಸ್ಸನರಸ್ಯ ಪ್ರಯಂಸತ್ ।

ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ॥

ಸವಿತಾ ಪಶ್ಚಾತಾತ್ಸವಿತಾ ಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಽಧರಾತ್ತಾತ್ ।

ಸವಿತಾ ನಸ್ಸುವತು ಸರ್ವತಾತಿಂ ಸವಿತಾನೋ ರಾಸತಾಂ ದೀರ್ಘಮಾಯುಃ ॥

ನವೋ ನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ ।

ಭಾಗಂ ದೇವೇಭ್ಯೋ ವಿದಧಾತ್ಯಾಯನ್ಪ್ರ ಚಂದ್ರ ಮಾಸ್ತಿರತೇ ದೀರ್ಘಮಾಯುಃ ॥

ಆಪ ಉಂದಂತು ಜೀವಸೇ ದೀರ್ಘಾಯುತ್ವಾಯ ವರ್ಚಸೇ ।

ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನೋಽಮರ್ತ್ಯಂ ಮರ್ತ್ಯೋ ಜೋಹವೀಮಿ ॥

ಜಾತವೇದೋ ಯಶೋ ಅಸ್ಮಾಸು ಧೇಹಿ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ।

ಯಸ್ಮೈ ತ್ವಂ ಸುಕೃತೇ ಜಾತವೇದ ಉ ಲೋಕಮಗ್ನೇ ಕೃಣವಸ್ಯೋನಂ ॥

---

ಬ್ರಾಹ್ಮಣರು ಹೇಳುತ್ತಾರೆ.

ನಂತರ ಯಜಮಾನನು ಎಡಭಾಗದ ಕಲಶವನ್ನು ಕೈಗೆ ತೆಗೆದುಕೊಂಡು ಶಾಂತಿರಸ್ತ್ವಿತ್ಯಾದಿ ಮಂತ್ರಗಳಿಂದ ಸ್ವಲ್ಪ ಸ್ವಲ್ಪವಾಗಿಯೇ ತಟ್ಟೆಯಲ್ಲಿ ಕಲಶೋದಕವನ್ನು ಬಿಡಬೇಕು. ಆಮೇಲೆ ''ಪುಣ್ಯಾಹ ಕಾರ್ಲಾ ವಾಚಯಿಷ್ಯೇ'' ಎಂದು ಬ್ರಾಹ್ಮಣರನ್ನು ಕೇಳಿಕೊಳ್ಳಬೇಕು. ಬ್ರಾಹ್ಮಣರು 'ವಾಚ್ಯತಾಂ' ಎಂದು ಹೇಳಬೇಕು. ನಂತರ 'ಉದ್ಗಾತೇವ' ಎಂಬಲ್ಲಿಂದ ''ಪುಣ್ಯಾಹ ಏವ ಕುರುತೇ'', ಎಂಬ ಮಂತ್ರಗಳನ್ನು

ಅಶ್ವಿನಂ ಸ ಪುತ್ರಿಣಂ ವೀರವಂತಂ ಗೋಮಂತಂ ರಯಿಂ ನಶತೇ ಸ್ವಸ್ತಿ ।

ಸಂತ್ವಾ ಸಿಂಚಾಮಿ ಯಜುಷಾ ಪ್ರಜಾಮಾಯುರ್ಧನಂ ಚ ॥

ದೀರ್ಘಮಾಯುರಸ್ತು ॥ ಮನಸ್ಸಮಾಧೀಯತಾಮಿತಿ ತಾನ್ ಸಂಪ್ರಾರ್ಥ್ಯ, ಸಮಾಹಿತ ಮನಸಸ್ಮಃ । ಇತಿತೈರುಕ್ತಃ, ಪ್ರಸೀದಂತು ಭವಂತಃ ಇತಿ ಪುನರ್ವದೇತ್, ಪ್ರಸನ್ನಾಸ್ಮಃ ಇತಿ ತೇ ಪ್ರತಿಬ್ರೂಯುಃ ॥

ಅಥಾಚಾರಾ ದೇಕಸ್ಮಿನ್ ವಿಶಾಲಸೌವರ್ಣಾದಿಭಾಜನೇ ಅಕ್ಷತಾನ್ನಿಕ್ಷಿಪ್ಯೋತ್ತರಕಲಶ ಮಾದಾಯ, ತದುಪರಿಸ್ಥಿತ ಪಾತ್ರಂ ಭೂಮೌ ನಿಧಾಯ, ತತ್ಕಲಶಂ ಸಪಲ್ಲವಂ ಶಂಖಮುದ್ರಯಾ ಗೃಹೀತ್ವಾ, ತಸ್ಮಿನ್ ಪಾತ್ರೇ ಪ್ರತಿಮಂತ್ರಂ ಸಿಂಚೇತ್ತತ್ರ ಮಂತ್ರಾಃ :-

ಶಾಂತಿರಸ್ತು । ಪುಷ್ಟಿರಸ್ತು । ತುಷ್ಟಿರಸ್ತು । ವೃದ್ಧಿರಸ್ತು । ಅವಿಘ್ನಮಸ್ತು । ಆಯುಷ್ಯಮಸ್ತು । ಆರೋಗ್ಯಮಸ್ತು । ಸ್ವಸ್ತ್ಯಸ್ತು । ಶಿವಂ ಕರ್ಮಾಸ್ತು । ಕರ್ಮಸಮೃದ್ಧಿರಸ್ತು । ಧರ್ಮಸಮೃದ್ಧಿರಸ್ತು । ಪುತ್ರ ಸಮೃದ್ಧಿರಸ್ತು । ವೇದಸಮೃದ್ಧಿರಸ್ತು । ಶಾಸ್ತ್ರ ಸಮೃದ್ಧಿರಸ್ತು । ಧನಧಾನ್ಯ ಸಮೃದ್ಧಿರಸ್ತು । ಇಷ್ಟಸಂಪದಸ್ತು । ತತ್ಪಾತ್ರಸ್ಯಬಹಿರೈಶಾನ್ಯಾಮರಿಷ್ಟನಿರಸನಮಸ್ತು । ಯತ್ಪಾಪಂ ತತ್ಪ್ರತಿಹತಮಸ್ತು । ಇತಿ ದ್ವಾಭ್ಯಾಂ ನಿಷಿಚ್ಯ ॥

ಪುನಃ ಪೂರ್ವವದ್ಯಚ್ಛ್ರೇಯಸ್ತದಸ್ತು । ಉತ್ತರೇ ಕರ್ಮಣ್ಯವಿಘ್ನಮಸ್ತು । ಉತ್ತರೋತ್ತರಮಹರಹರಭಿವೃದ್ಧಿರಸ್ತು । ಉತ್ತರೋತ್ತರಾಃ ಕ್ರಿಯಾಶ್ಶು ಭಾಶ್ಶೋಭನಾಸ್ಸಂಪದ್ಯಂತಾಂ । ತಿಥಿಕರಣಮುಹೂರ್ತನಕ್ಷತ್ರಲಗ್ನ ಸಂಪದಸ್ತು । ತಿಥಿಕರಣ ಮುಹೂರ್ತ ನಕ್ಷತ್ರ ಲಗ್ನಾಧಿದೇವತಾಃ ಪ್ರೀಯಂತಾಂ । ಅಗ್ನಿಪುರೋಗಾ ವಿಶ್ವೇದೇವಾಃ ಪ್ರೀಯಂತಾಂ । ಇಂದ್ರ ಪುರೋಗಾ ಮರುದ್ಗಣಾಃ ಪ್ರೀಯಂತಾಂ । ವಸಿಷ್ಠ ಪುರೋಗಾ ಋಷಿಗಣಾಃ ಪ್ರೀಯಂತಾಂ ॥ ಮಾಹೇಶ್ವರೀ ಪುರೋಗಾ ಮಾತರಃ ಪ್ರೀಯಂತಾಂ । ಶ್ರೀವಿಷ್ಣು ಪುರೋಗಾಸ್ಸರ್ವೇದೇವಾಃ ಪ್ರೀಯಂತಾಂ । ಋಷಯಶ್ಛಂದಾಂಸ್ಯಾಚಾರ್ಯಾ ವೇದಾ

---

ಹೇಳಿ, 'ಮಹ್ಯಂ' ಎಂದಾರಂಭಿಸಿ ಆದಿವಸದ ಕರ್ಮದ ಹೆಸರನ್ನು ಹೇಳಿ 'ಪುಣ್ಯಾಹಂ ಭವಂತೋ ಬ್ರುವಂತು' ಎಂದು ಮೂರು ಸಲ ಹೇಳಬೇಕು ಬ್ರಾಹ್ಮಣರು ''ಓಂ ಪುಣ್ಯಾಹಂ'' ಎಂದು ಮೂರು ಸಲವೂ ಹೇಳಬೇಕು.

ಯಜಮಾನನು 'ಓಂ ಸ್ವಸ್ತಯೇ' ಎಂದಾರಂಭಿಸಿ 'ಅಮೃತಂ ಸ್ವಸ್ತಿ' ಎಂದು ಹೇಳಿ 'ಮಹ್ಯಂ----ಕರ್ಮಣೇ, ಎಂದು ಹೇಳಲು ಬ್ರಾಹ್ಮಣರು 'ಆಯುಷ್ಮತೇ ಸ್ವಸ್ತಿ' ಎಂದು ಮೂರು ಸಲವೂ ಹೇಳಬೇಕು. ಹಾಗೆಯೇ 'ಋಧ್ಯಾಮ' ಎಂಬ ಮಂತ್ರವನ್ನೂ ಹೇಳಬೇಕು.

''ಶ್ರಿಯೇ ಜಾತಃ'' ಈ ಮಂತ್ರಗಳನ್ನು ಹೇಳಿದಾಗ ಬ್ರಾಹ್ಮಣರು ''ಅಸ್ತು ಶ್ರೀಃ'' ಎಂದು

ಯಜ್ಞಾ ದಕ್ಷಿಣಾಶ್ಚ ಪ್ರೀಯಂತಾಂ । ಬ್ರಹ್ಮ ಚ ಬ್ರಾಹ್ಮಣಾಶ್ಚ ಪ್ರೀಯಂತಾಂ । ಬ್ರಹ್ಮಾ ವಿಷ್ಣು ಮಹೇಶ್ವರಾಶ್ಚ ಪ್ರೀಯಂತಾಂ । ಶ್ರೀ ಸರಸ್ವತ್ಯೌ ಪ್ರೀಯೇತಾಂ । ಶ್ರದ್ಧಾ ಮೇಧೇ ಪ್ರೀಯೇತಾಂ । ಭಗವತೀ ಶಾಂತಿಕರೀ ಪ್ರೀಯತಾಂ । ಭಗವತೀ ಪುಷ್ಟಿಕರೀ ಪ್ರೀಯತಾಂ । ಭಗವತೀ ತುಷ್ಟಿಕರೀ ಪ್ರೀಯತಾಂ । ಭಗವತೀ ವೃದ್ಧಿಕರೀ ಪ್ರೀಯತಾಂ । ಭಗವತೀ ಋದ್ಧಿಕರೀ ಪ್ರೀಯತಾಂ । ಭಗವತ್ಯೋ ಲೋಕಮಾತರಃ ಪ್ರೀಯಂತಾಂ । ಭಗವಾನ್ಮಹಾದೇವಸ್ಸಪತ್ನೀಕಸ್ಸಸುತಸ್ಸಪಾರಿಷದಃ ಪ್ರೀಯತಾಂ । ಸರ್ವೇ ಸ್ವಸ್ಥಾನಗತಾಃ ಪ್ರೀಯಂತಾಂ । ಹರಿಹರ ಹಿರಣ್ಯಗರ್ಭಾಃ ಪ್ರೀಯಂತಾಂ । ಸರ್ವಾಗ್ರಾಮದೇವತಾಃ ಪ್ರೀಯಂತಾಂ । ಸರ್ವಾಃ ಕುಲದೇವತಾಃ ಪ್ರೀಯಂತಾಂ ॥

ತತೋ ಬಹಿರ್ದೇಶೇನೈರ್ಋತ್ಯಾಂಹತಾಃ ಬ್ರಹ್ಮದ್ವಿಷಃ । ಹತಾಃ ಪರಿಪಂಥಿನಃ । ಹತಾ ಅಸ್ಯ ಕರ್ಮಣೋ ವಿಘ್ನಕರ್ತಾರಃ । ಶತ್ರವಃ ಪರಾಭವಂ ಯಾಂತು । ಶಾಮ್ಯಂತು ಘೋರಾಣಿ । ಶಾಮ್ಯಂತು ಪಾಪಾನಿ । ಶಾಮ್ಯತ್ವೀತಯಃ । ಇತಿ ಸಪ್ತಭಿರ್ನಿಷಿಚ್ಯ ॥ ಅಥ ಪೂರ್ವವಚ್ಛುಭಾನಿ ವರ್ಧಂತಾಂ । ಶಿವಾ ಆಪಸ್ಸಂತು । ಶಿವಾ ಋತವಸ್ಸಂತು । ಶಿವಾ ಓಷಧಯಸ್ಸಂತು । ಶಿವಾ ವನಸ್ಪತಯಸ್ಸಂತು । ಶಿವಾ ಅಗ್ನಯಸ್ಸಂತು । ಶಿವಾ ಆಹುತ ಯಸ್ಸಂತು । ಶಿವಾ ಅತಿಥಯಸ್ಸಂತು ॥

**ಅಹೋರಾತ್ರೇ ಶಿವೇ ಸ್ಯಾತಾಂ । ನಿಕಾಮೇನಿಕಾಮೇ ನಃ ಪರ್ಜನ್ಯೋ**

**ವರ್ಷತು ಫಲಿನ್ಯೋನ ಓಷಧಯಃ ಪಚ್ಯಂತಾಂ ಯೋಗಕ್ಷೇಮೋ ನಃ ಕಲ್ಪತಾಂ ॥**

ಶುಕ್ರಾಂಗಾರಕಬುಧಬೃಹಸ್ಪತಿಶನೈಶ್ಚರರಾಹುಕೇತುಸೋಮಸಹಿತಾ ಆದಿತ್ಯ ಪುರೋಗಾಃ ಸರ್ವೇಗ್ರಹಾಃ ಪ್ರೀಯಂತಾಂ । ಪ್ರೀಯತಾಂ ಭಗವಾನ್ನಾರಾಯಣಃ । ಪ್ರೀಯತಾಂ ಭಗವಾನ್ಪರ್ಜನ್ಯಃ । ಪ್ರೀಯತಾಂ ಭಗವಾನ್ಸ್ವಾಮೀ ಮಹಾಸೇನಃ । ಇತಿ ಕಿಂಚಿತ್ಕಿಂಚಿಜ್ಜಲಂ ನಿಷಿಚ್ಯ, ತತ್ಕಲಶಂ ಪೂರ್ವವನ್ನಿಧಾಯ, ಪುಣ್ಯಾಹಕಾಲಾನ್ ವಾಚಯಿಷ್ಯೇ ಇತಿ ವದೇತ್ । ಪುಣ್ಯಾಹಕಾಲಾವಾಚ್ಯಂತಾಮಿತಿ ಬ್ರಾಹ್ಮಣೈಃ ಪ್ರತ್ಯುಕ್ತೇ :-

---

ಹೇಳಬೇಕು.

ಆಮೇಲೆ ಯಜಮಾನನು ಉತ್ತರಕಲಶವನ್ನು ಬಲಗೈಯಲ್ಲೂ, ದಕ್ಷಿಣ ಕಲಶವನ್ನು ಎಡಗೈಯಲ್ಲೂ ಹಿಡಿದು ''ವಾಸ್ತೋಷ್ಪತೇ ---ಏಧಿನಃ''. ಮಂತ್ರಗಳನ್ನೂ ಹೇಳುತ್ತಾ ಧಾರೆಯಾಗಿ ತಟ್ಟೆಯಲ್ಲಿ ನೀರನ್ನುಬಿಡಬೇಕು ಆಮೇಲೆ ಪತ್ನಿಯನ್ನು ಯಜಮಾನನ ಎಡಭಾಗದಲ್ಲಿ ಕುಳ್ಳಿರಿಸಿ, ಬ್ರಾಹ್ಮಣರು ''ಸಮುದ್ರ ಜ್ಯೇಷ್ಠಾಃ'' ಇತ್ಯಾದಿ ಮಂತ್ರಗಳನ್ನು ಹೇಳುತ್ತಾ ತಟ್ಟೆಯಲ್ಲಿದ್ದ ನೀರನ್ನು ಮಾವಿನ ಸೊಪ್ಪು ಮತ್ತು ದೂರ್ವಾದಿಗಳಿಂದ ಮಾರ್ಜನೆ ಮಾಡುವರು.

ಮಾರ್ಜನೆಯಾದನಂತರ ಯಜಮಾನನು ''ಪ್ರಾಚ್ಯಾಂ ದಿಶಿ'' ಇತ್ಯಾದಿ ಮಂತ್ರಗಳಿಂದ ನಾಲ್ಕು

ಉದ್ಗಾತೇವ ಶಕುನೇ ಸಾಮ ಗಾಯಸಿ ಬ್ರಹ್ಮಪುತ್ರ ಇವ ಸವನೇಷು ಶಂಸಸಿ ।
ವೃಷೇವ ವಾಜೀ ಶಿಶುಮತೀರಪೀತ್ಯಾ ಸರ್ವತೋ ನಶ್ಯಕುನೇ ಭದ್ರಮಾವದ ವಿಶ್ವತೋ
ನಶ್ಯಕುನೇ ಪುಣ್ಯಮಾವದ ॥

ಯಾಜ್ಯಯಾ ಯಜತಿ ಪ್ರತ್ತಿರ್ವೈಯಾಜ್ಯಾ ಪುಣ್ಯೈವ ಲಕ್ಷ್ಮೀಃ ಪುಣ್ಯಾಮೇವ
ತಲ್ಲಕ್ಷ್ಮೀಂ ಸಂಭಾವಯತಿ ಪುಣ್ಯಾಂ ಲಕ್ಷ್ಮೀಂ ಸಂಸ್ಕುರುತೇ ॥

ಯತ್ಪುಣ್ಯಂ ನಕ್ಷತ್ರಂ । ತದ್ಬಟ್ಕುರ್ವೀತೋಪವ್ಯುಷಂ । ಯದಾ ವೈ ಸೂರ್ಯ
ಉದೇತಿ । ಅಥ ನಕ್ಷತ್ರಂ ನೈತಿ । ಯಾವತಿ ತತ್ರ ಸೂರ್ಯೋಗಚ್ಛೇತ್ । ಯತ್ರ
ಜಘನ್ಯಂ ಪಶ್ಯೇತ್ । ತಾವತಿ ಕುರ್ವೀತ ಯತ್ಕಾರೀಸ್ಯಾತ್ । ಪುಣ್ಯಾಹ ಏವ ಕುರುತೇ ॥

ಓಂ ತಾನಿ ವಾ ಏತಾನಿ ಯಮನಕ್ಷತ್ರಾಣಿ । ಯಾನ್ಯೇವ ದೇವನಕ್ಷತ್ರಾಣಿ ।
ತೇಷು ಕುರ್ವೀತ ಯತ್ಕಾರೀಸ್ಯಾತ್ । ಪುಣ್ಯಾಹ ಏವ ಕುರುತೇ ॥

ಓಂ ಪುಣ್ಯಾಹಂ ಭವಂತೋ ಬ್ರುವಂತ್ವಿತಿ ಮಂದ್ರಸ್ವರೇಣೋಕ್ತ್ವಾ ತತೋ ಮಧ್ಯಮ ಸ್ವರೇಣ ತತ ಉತ್ತಮಸ್ವರೇಣೈವಂ ತ್ರಿರ್ವದೇತ್ ॥

ಓಂ ಪುಣ್ಯಾಹಮಿತಿ ವಿಪ್ರಾಸ್ತಥೈವ ಪ್ರತಿವದೇಯುಃ ॥

---

ದಿಕ್ಕುಗಳು ಮತ್ತು ಊರ್ಧ್ವಾಧೋ ದಿಕ್ಕುಗಳಿಗೆ ಪ್ರೋಕ್ಷಿಸಬೇಕು.

ಇಷ್ಟೆಲ್ಲಾ ಕರ್ಮಸಮಾಪ್ತಿಯಾದೊಡನೆ ಬ್ರಾಹ್ಮಣರು ಯಜಮಾನನಿಗೂ ಅವನ ಪರಿವಾರಕ್ಕೂ ತೀರ್ಥ ಪ್ರಸಾದಗಳನ್ನು ಕೊಟ್ಟು ಆ ಯಜಮಾನನಿಂದ ಯಥೋಚಿತವಾದ ದಕ್ಷಿಣೆಯನ್ನು ಪಡೆದು ಅವನನ್ನು ಆಶೀರ್ವದಿಸಬೇಕು.

ಸ್ವಸ್ತಯೇ ವಾಯುಮುಪಬ್ರವಾಮಹೈ ಸೋಮಂ ಸ್ವಸ್ತಿ ಭುವನಸ್ಯ ಯಸ್ಪತಿಃ ।
ಬೃಹಸ್ಪತಿಂ ಸರ್ವಗಣಂ ಸ್ವಸ್ತಯೇ ಸ್ವಸ್ತಯ ಆದಿತ್ಯಾಸೋ ಭವಂತು ನಃ ।
ಆದಿತ್ಯ ಉದಯನೀಯಃ ಪಥ್ಯಯೈವೇತ ಸ್ವಸ್ತ್ಯಾ ಪ್ರಯಂತಿ ಪಥ್ಯಾಂ
ಸ್ವಸ್ತಿಮಭ್ಯುದ್ಯಂತಿ ಸ್ವಸ್ತ್ಯೈವೇತಃ ಪ್ರಯಂತಿ ಸ್ವಸ್ತ್ಯುದ್ಯಂತಿ ಸ್ವಸ್ತ್ಯುದ್ಯಂತಿ ॥
ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಸ್ಸ್ವಸ್ತಿ ನಃ ಪೂಷಾ ವಿಶ್ವವೇದಾಃ ।
ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಸ್ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥
ಅಷ್ಟೌ ದೇವಾ ವಸವಸ್ಸೋಮ್ಯಾಸಃ । ಚತಸ್ರೋ ದೇವೀರಜರಾಶ್ಶ್ರವಿಷ್ಠಾಃ ।
ತೇ ಯಜ್ಞಂ ಪಾಂತು ರಜಸಃ ಪರಸ್ತಾತ್ । ಸಂವತ್ಸರೀಣಮಮೃತಂ ಸ್ವಸ್ತಿ ॥

ಮಹ್ಯಂಸಹ ಕುಟುಂಬಾಯ ಶುದ್ಧಿಕರ್ಮಣೇ ಮಹಾಜನಾನ್ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷಮಾಣಾಯ ಅಮುಕಕರ್ಮಣೇ ಆಯುಷ್ಮತೇ . ಸ್ವಸ್ತಿ ಭವಂತೋ ಬ್ರುವಂತು ॥

ಮಹ್ಯಂಸಹ ಕುಟುಂಬಾಯ ವೃದ್ಧಿ---ಬ್ರುವಂತು ॥

ಮಹ್ಯಂ ಸಹ ಕುಟುಂಬಾಯ ಅಭ್ಯುದಯ---ಬ್ರುವಂತು ॥

ಏವಂ ತ್ರಿವಾರಮುಕ್ತ್ವಾ ತೈಸ್ತಥೈವ ಆಯುಷ್ಮತೇ ಸ್ವಸ್ತೀತಿಪ್ರತ್ಯುಕ್ತೇ

ಋಧ್ಯಾಮ ಸ್ತೋಮಂ ಸನುಯಾಮ ವಾಜಮಾನೋಮಂತ್ರಂ
ಸರಥೇಹೋಪಯಾತಂ । ಯಶೋ ನ ಪಕ್ವಂ ಮಧು ಗೋಷ್ವಂತರಾ ಭೂತಾಂಶೋ
ಅಶ್ವಿನೋಃಕಾಮಮಪ್ರಾಃ ॥

ಸರ್ವಾಮೃದ್ಧಿಮೃಧ್ನುಯಾಮಿತಿ ತಂ ವೈ. ತೇಜಸ್ಯೈವ ಪುರಸ್ತಾತ್ತ್ಸರ್ಯ ಭವಚ್ಛಂದೋಭಿರ್ಮಧ್ಯತೋಕ್ಷರೈರುಪರಿಷ್ಟಾದ್ಗಾಯತ್ರ್ಯಾ ಸರ್ವತೋ ದ್ವಾದಶಾಹಂ ಪರಿಭೂಯಾತ್ಸರ್ವಾಮೃದ್ಧಿಮಾರ್ಧ್ನೋತ್ ಸರ್ವಾಮೃದ್ಧಿಮೃಧ್ನೋತಿ ಯ ಏವಂ ವೇದ ॥

ಋಧ್ಯಾಸ್ಮ ಹವ್ಯೈರ್ನಮಸೋಪಸದ್ಯ । ಮಿತ್ರಂ ದೇವಂ ಮಿತ್ರಧೇಯಂ ನೋ ಅಸ್ತು ॥

ಅನೂರಾಧಾನ್, ಹವಿಷಾ ವರ್ಧಯಂತಃ । ಶತಂ ಜೀವೇಮ ಶರದಸ್ಸವೀರಾಃ ॥

ತ್ರೀಣಿ ತ್ರೀಣಿ ವೈ ದೇವಾನಾಮೃದ್ಧಾನಿ । ತ್ರೀಣಿ ಛಂದಾಗ್ಂಸಿ । ತ್ರೀಣಿ ಸವನಾನಿ । ತ್ರಯ ಇಮೇ ಲೋಕಾಃ । ಋಧ್ಯಾಮೇವ ತದ್ವೀರ್ಯ ಏಷು ಲೋಕೇಷು ಪ್ರತಿತಿಷ್ಠತಿ ॥

ಅಸ್ಯಕರ್ಮಣಃ ಋದ್ಧಿಂ ಭವಂತೋ ಬ್ರುವಂತು । ತೇಜೋಮೃಧ್ಯತಾಮಿತಿ ಪ್ರತಿವದೇಯುಃ ॥ ಶ್ರೀಸೂಕ್ತಮ್.

ಶ್ರಿಯೇ ಜಾತಶ್ಶ್ರಿಯ ಆನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದದಾತಿ ।
ಶ್ರಿಯಂ ವಸಾನಾ ಅಮೃತತ್ವಮಾಯನ್ಭವಂತಿ ಸತ್ಯಾ ಸಮಿಥಾ ಮಿತದ್ರೌ ॥
ಶ್ರಿಯಏವೈನಂತಚ್ಛ್ರಿಯಮಾದಧಾತಿ ಸಂತತಮೃಚಾವಷಟ್ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥ ಋಚಸ್ಸಾಮಾನಿ ಯಜೂಗ್ಂಷಿ ।
ಸಾ ಹಿ ಶ್ರೀರಮೃ ತಾ ಸತಾಂ ॥ ಶುಕ್ರೇಭಿರಂಗೈರಜ ಆತತನ್ವಾನ್ ಕ್ರತುಂ ಪುನಾನಃ ಕವಿಭಿಃ ಪವಿತ್ರೈಃ । ಶೋಚಿರ್ವಸಾನಃ ಪರ್ಯಾಯುರಪಾಂ ಶ್ರಿಯೋ ಮಿಮೀತೇ ಬೃಹತೀರನೂನಾಃ ॥

ಅಸ್ಯ ಕರ್ಮಣಃ ಶ್ರೀರಸ್ತ್ವಿತಿ ಭವಂತೋ ಬ್ರುವಂತು ಇತಿ ವದೇತ್ ॥ ಅಸ್ತು ಶ್ರೀಃ ಇತಿ ಪ್ರತ್ಯುಕ್ತೇ । ಕರ್ಮ ದೇವತಾತ್ಮಕೋ ಭಗವಾನ್ಪ್ರಜಾಪತಿಃ ಪ್ರೀಯತಾಮಿತಿ ಭವಂತೋ ಬ್ರುವಂತು ॥ ಇತಿ ಪುನರ್ವದೇತ್ ॥ ಬ್ರಾಹ್ಮಣಾಶ್ಚ-ಪ್ರೀಯತಾಂ ಭಗವಾನ್ ಕರ್ಮದೇವತಾತ್ಮಕಃ ಪ್ರಜಾಪತಿಃ ॥ ವರ್ಷಶತಂ ಸಂಪೂರ್ಣಮಸ್ತು । ಗೋತ್ರಾಭಿವೃದ್ಧಿರಸ್ತು ॥ ಶಿವಂ ಶಿವಮಸ್ತು ಇತಿ ಪ್ರತಿಬ್ರೂಯುಃ ॥

ತತ ಉತ್ತರ ಕಲಶಂ ದಕ್ಷಿಣೇನ ಹಸ್ತೇನ ದಕ್ಷಿಣಕಲಶಂ ವಾಮ ಹಸ್ತೇನ ಗೃಹೀತ್ವಾ ತಾಭ್ಯಾಮೇಕಧಾರಾಭ್ಯಾಂ ಪೂರ್ವಸ್ಮಿನ್ಪಾತ್ರೇ ವಾಸ್ತೋಷ್ಪತೇ ಪ್ರತಿಜಾನೀಹ್ಯಸ್ಮಾನಿತ್ಯಾದಿಭಿಃ ಚತುರ್ಭಿರ್ಮಂತ್ರೈಃ ಜಲಂ ನಿಷಿಂಚೇತ್ ॥

ವಾಸ್ತೋಷ್ಪತೇ ಪ್ರತಿಜಾನೀಹ್ಯಸ್ಮಾನ್ಸ್ವಾವೇಶೋ ಅನಮೀವೋ ಭವಾನಃ ।
ಯತ್ತ್ವೇಮಹೇ ಪ್ರತಿ ತನ್ನೋ ಜುಷಸ್ವ ಶಂನೋ ಭವ ದ್ವಿಪದೇ ಶಂ ಚತುಷ್ಪದೇ ॥
ವಾಸ್ತೋಷ್ಪತೇ ಪ್ರತರಣೋ ನ ಏಧಿ ಗಯಸ್ಫಾನೋ ಗೋಭಿರಶ್ವೇಭಿರಿಂದೋ ।
ಅಜರಾಸಸ್ತೇ ಸಖ್ಯೇ ಸ್ಯಾಮ ಪಿತೇವ ಪುತ್ರಾನ್ಪ್ರತಿ ನೋ ಜುಷಸ್ವ ॥
ವಾಸ್ತೋಷ್ಪತೇ ಶಗ್ಮಯಾ ಸಂಸದಾ ತೇ ಸಕ್ಷೀಮಹಿ ರಣ್ವಯಾ ಗಾತುಮತ್ಯಾ ।
ಪಾಹಿ ಕ್ಷೇಮ ಉತ ಯೋಗೇ ವರಂ ನೋ ಯೂಯಂ ಪಾತಸ್ವಸ್ತಿಭಿಸ್ಸದಾನಃ ॥
ಅಮೀವಹಾ ವಾಸ್ತೋಷ್ಪತೇ ವಿಶ್ವಾರೂಪಾಣ್ಯಾವಿಶನ್ । ಸಖಾ ಸುಶೇವ ಏಧಿ ನಃ ॥

ತತಃ ಪತ್ನೀಂ ವಾಮತ ಉಪವೇಶ್ಯ ತಜ್ಜಲೇನ ವಿಪ್ರಾಸ್ತಿಷ್ಠಂತಸ್ಸಪಲ್ಲವ ದೂರ್ವಾಂಕುರಾದಿಭಿರ್ಮಂತ್ರ ಪೂರ್ವಕಮಭಿಷಿಂಚೇಯುಃ । ಸಮುದ್ರಜ್ಯೇಷ್ಠಾ ಇತಿ ಚತಸೃಭಿಃ, ತ್ರಾಯಂತಾಮಿತಿ ತಿಸೃಭಿಃ, ಇಮಾ ಆಪಶ್ಶಿವತಮಾ ಇತಿ ತೃಚೇನ, ದೇವಸ್ಯತ್ವಾ ಸವಿತುರಿತ್ಯನಯಾ ಚ,

7.49
ಸಮುದ್ರಜ್ಯೇಷ್ಠಾಸ್ಸಲಿಲಸ್ಯ ಮಧ್ಯಾತ್ಪುನಾನಾ ಯಂತ್ಯನಿವಿಶಮಾನಾಃ । ಇಂದ್ರೋ ಯಾ ವಜ್ರೀ ವೃಷಭೋ ರರಾದ ತಾ ಆಪೋ ದೇವೀರಿಹ ಮಾಮವಂತು ॥ ಯಾ ಆಪೋ ದಿವ್ಯಾ ಉತ ವಾ ಸ್ರವಂತಿ ಖನಿತ್ರಿಮಾ ಉತ ವಾ ಯಾ ಸ್ವಯಂಜಾಃ । ಸಮುದ್ರಾರ್ಥಾ ಯಾಶ್ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮವಂತು ॥ ಯಾಸಾಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯಂ ಜನಾನಾಂ । ಮಧುಶ್ಚುತಶ್ಶುಚಯೋ ಯಾಃ ಪಾವಕಾಸ್ತಾ ಆಪೋದೇವೀರಿಹ ಮಾಮವಂತು ॥ ಯಾಸುರಾಜಾ ವರುಣೋ ಯಾಸು ಸೋಮೋ ವಿಶ್ವೇದೇವಾ ಯಾಸೂರ್ಜಂ ಮದಂತಿ । ವೈಶ್ವಾನರೋ ಯಾಸ್ವಗ್ನಿಃ ಪ್ರವಿಷ್ಟಸ್ತಾ ಆಪೋ ದೇವೀರಿಹ ಮಾಮವಂತು ॥ 4 ತ್ರಾಯಂತಾ ಮಿಹ ದೇವಾಸ್ತ್ರಾಯತಾಂ ಮರುತಾಂ ಗಣಃ ।
10.137.6
ತ್ರಾಯಂತಾಂ ವಿಶ್ವಾ ಭೂತಾನಿ ಯಥಾಽಯಮರಪಾ ಅಸತ್ ॥ ಆಪ ಇದ್ವಾ ಉ ಭೇಷಜೀರಾಪೋ ಅಮೀವಚಾತನೀಃ । ಆಪಸ್ಸರ್ವಸ್ಯ ಭೇಷಜೀಸ್ತಾಸ್ತೇ ಕೃಣ್ವಂತು ಭೇಷಜಂ॥ ಹಸ್ತಾಭ್ಯಾಂ ದಶಶಾಖಾಭ್ಯಾಂ ಜಿಹ್ವಾ ವಾಚಃ ಪುರೋಗವೀ । ಅನಾಮಯಿತ್ನುಭ್ಯಾಂ ತ್ವಾತಾಭ್ಯಾಂ ತ್ವೋಪಸ್ಪೃಶಾಮಸಿ ॥ ಇಮಾ ಆಪಶ್ಶಿವತಮಾ ಇಮಾಸ್ಸರ್ವಸ್ಯ ಭೇಷಜೀಃ । ಇಮಾ ರಾಷ್ಟ್ರಸ್ಯ ವರ್ಧನೀರಿಮಾ ರಾಷ್ಟ್ರಭೃತೋಽಮೃತಾಃ ॥ ಯಾಭಿರಿಂದ್ರಮಭ್ಯಷಿಂಚತ್ಪ್ರಜಾಪತಿಸ್ಸೋಮಂ ರಾಜಾನಂ ವರುಣಂ ಯಮಂ ಮನುಂ । ತಾಭಿರದ್ಭಿರಭಿಷಿಂಚಾಮಿ ತ್ವಾಮಹಂ ರಾಜ್ಞಾಂ ತ್ವಮಧಿರಾಜೋ ಭವೇಹ ॥ ಮಹಾಂತಂ ತ್ವಾ ಮಹೀನಾಂ ಸಮ್ರಾಜಂ ಚರ್ಷಣೀನಾಂ ।

ದೇವೀ ಜನಿತ್ರ್ಯಜೀಜನದ್ಭದ್ರಾ ಜನಿತ್ರ್ಯಜೀಜನತ್ ॥ ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನೇಸ್ತೇಜಸಾ ಸೂರ್ಯಸ್ಯ ವರ್ಚಸೇಂದ್ರಸ್ಯೇಂದ್ರಿಯೇಣಾಭಿಷಿಂಚಾಮಿ ॥ ಬಲಾಯಶ್ರಿಯೈಯಶಸೇಽನ್ನಾದ್ಯಾಯ ಭೂರ್ಭುವಸ್ಸ್ವರೋಮಮೃತಾಭಿಷೇಕೋಽಸ್ತು ॥

ಪ್ರಾಚ್ಯಾಂ ದಿಶಿ ದೇವಾ ಋತ್ವಿಜೋ ಮಾರ್ಜಯಂತಾಂ ದಕ್ಷಿಣಸ್ಯಾಂ ದಿಶಿ ಮಾಸಾಃ ಪಿತರೋ ಮಾರ್ಜಯಂತಾಂ ॥ ಅಪ ಉಪಸ್ಪೃಶ್ಯ, ಪ್ರತೀಚ್ಯಾಂ ದಿಶಿ ಗೃಹಾಃ ಪಶವೋ ಮಾರ್ಜಯಂತಾಮುದೀಚ್ಯಾಂ ದಿಶ್ಯಾಪ ಓಷಧಯೋ ವನಸ್ಪತಯೋಮಾರ್ಜಯಂತಾಮೂರ್ಧ್ವಾಯಾಂ ದಿಶಿ ಯಜ್ಞಸ್ಸಂವತ್ಸರಃ ಪ್ರಜಾಪತಿರ್ಮಾರ್ಜಯತಾಂ ॥ ಅ ಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶ೯ । ಸಖಾ ಸುಶೇವ ಏಧಿನಃ ॥

ಶುಭಂ ಶುಭಂ ಸ್ವಸ್ತಿ ಪುಣ್ಯಾಹ ಸಮೃದ್ಧಿರಸ್ತು ॥

ಏತೇಭ್ಯೋ ಬ್ರಾಹ್ಮಣೇಭ್ಯೋ ನಾನಾಗೋತ್ರೇಭ್ಯೋ ನಾನಾನಾಮಭ್ಯಃ ಸ್ವಸ್ತಿ ಪುಣ್ಯಾಹ ವಾಚನ ಮಂತ್ರಜಪದಕ್ಷಿಣಾಃ ತೇಭ್ಯಸ್ತೇಭ್ಯಸ್ಸಂಪ್ರದದೇ ನಮಮ ॥

ತತೋ ವಿಪ್ರೇಭ್ಯೋ ವೇದೋಕ್ತ ಮಂತ್ರಾಶಿಷೋ ಗೃಹೀತ್ವಾ ತೈರ್ದತ್ತಾಕ್ಷತ ಪುಷ್ಪಾದಿಕಂ ಶಿರಸಿ ಧಾರಯೇತ್ ॥

ಇತಿ ಶ್ರೀನೃಸಿಂಹ ಪ್ರಯೋಗ ಪಾರಿಜಾತೇ

ಸಕಲಕರ್ಮೋಪಯೋಗೀ ಪುಣ್ಯಾಹ ವಾಚನವಿಧಿಃ

# ಅಂಕುರಾರ್ಪಣ ಪ್ರಯೋಗಃ ॥

ಅಥಲೋಕಾನುಸಾರಿತ್ವಾತ್ ಅನುಕಲ್ಪಪಕ್ಷಾಶ್ರಯಣೇನೈವ ಪ್ರಯೋಗಃ ಕಥ್ಯತೇ ॥

ಗರ್ಭಾಧಾನಾದಿನಾಮಕರ್ಮಾಂತ ಕರ್ಮಾಣಿಮುಕ್ತ್ವಾ ಅನ್ನಪ್ರಾಶನಾದಿ ವಿವಾಹಾಂತ ಸಂಸ್ಕಾರೇಷು ಅನ್ಯೇಷು ನವಾಗಾರಪ್ರವೇಶಾದಿ ಶುಭಕರ್ಮಸು ಪೂರ್ವ ದಿನೇ ರಾತ್ರೌ ಸದ್ಯೋ ವಾ ಅಂಕುರಾರ್ಪಣಂ ಕುರ್ಯಾತ್ ॥ ತತ್ರಾಯಂ ಕ್ರಮಃ :

ತಿಥ್ಯಾದಿಕಂ ಸಂಕೀರ್ತ್ಯ, ಅಮುಕಕರ್ಮಕರ್ತುಂ ಅದೌಕರ್ಮ ಸಾಫಲ್ಯನಿರಂತರ ಶುಭತ್ವ ಸಿದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಅಂಕುರಾರ್ಪಣಂ ಕರಿಷ್ಯ ಇತಿ ಸಂಕಲ್ಪ್ಯ, ಶುದ್ಧಸ್ಥಳಂ ಗೋಮಯೇನೋಪಲಿಪ್ಯ, ರಂಗವಲ್ಯಾದಿಭಿರಲಂಕೃತ್ಯ, ಸಿತಾಕ್ಷತೈಸ್ಸಂಪ್ರಕೀರ್ಯ, ತತ್ರ ಶ್ವೇತಸೂತ್ರ ವೇಷ್ಟಿತಾಃ ಪಂಚಪಾಲಿಕಾಸ್ಸಂಸ್ಥಾಪ್ಯ, ತಾಸು ವಲ್ಮೀಕಮೃತ್ತಿಕಾಂ ಹ್ರದಪಂಕಂ ಶುಷ್ಕಗೋಮಯಂ ಚ ಪ್ರಕ್ಷಿಪ್ಯ ಪಾಲಿಕಾಮೂಲೇ ದೂರ್ವಾ ಅಶ್ವತ್ಥಪರ್ಣಂ ಶಿರೀಷಂ ಬಿಲ್ವಪತ್ರಂ ಚ ನಿಧಾಯ, ಮಧ್ಯಾದಿಪಂಚಪಾಲಿಕಾಸು ಬ್ರಹ್ಮಾದಿ ಪಂಚದೇವತಾ ಪೂಜಾಂ ಕುರ್ಯಾತ್ ॥ ತತ್ರಾಯಂ ಕ್ರಮಃ :-

ಬ್ರಹ್ಮಜಜ್ಞಾನಮಿತ್ಯಸ್ಯ ನಕುಲೋ ಬ್ರಹ್ಮಾತ್ರಿಷ್ಟುಪ್ :-

**ಬ್ರಹ್ಮಜಜ್ಞಾನಂ ಪ್ರಥಮಂಪುರಸ್ತಾದ್ವಿಸೀಮತಸ್ಸುರುಚೋ ವೇನ ಆವಃ ।**
**ಸ ಬುಧ್ನ್ಯಾ ಉಪಮಾ ಅಸ್ಯ ವಿಷ್ಠಾಸ್ಸತಶ್ಚ ಯೋನಿಮಸತಶ್ಚ ವಿವಃ ॥**

ಅನೇನ ಮಧ್ಯಮಪಾಲಿಕಾಯಾಂ ಬ್ರಹ್ಮಾಣಂ ॥

ಇಂದ್ರಂವೋ ಮಧುಚ್ಛಂದಾ ಇಂದ್ರೋಗಾಯತ್ರೀ :-

**ಇಂದ್ರಂ ವೋ ವಿಶ್ವತಸ್ಪರಿಹವಾಮಹೇ ಜನೇಭ್ಯಃ । ಅಸ್ಮಾಕಮಸ್ತು ಕೇವಲಃ ॥**

---

**ಅಂಕುರಾರ್ಪಣ**

ಅಂಕುರಗಳನ್ನು ಅಂದರೆ ಮೊಳಕೆಗಳನ್ನು ಅರ್ಪಿಸುವುದು. ಅನ್ನಪ್ರಾಶನಾದಿವಿವಾಹಾಂತ ಮತ್ತು ನವಾಗಾರಪ್ರವೇಶಾದಿ ಶುಭಕರ್ಮಗಳಲ್ಲಿ ಹಿಂದಿನ ರಾತ್ರೆ ಅಥವಾ ಆ ದಿನ ಅಂಕುರಾರ್ಪಣ ಕರ್ಮವನ್ನು ಮಾಡಬೇಕು. ಭೂಮಿಯಲ್ಲಿ ಸುಮುಹೂರ್ತದಲ್ಲಿ ಅಂದರೆ ಸಕಾಲದಲ್ಲಿ ಬೀಜವನ್ನು ಬಿತ್ತಿದರೆ ಅದು

ಅನೇನ ಪ್ರಾಚ್ಯಾಂ ಪಾಲಿಕಾಯಾಮಿಂದ್ರಂ ॥ ಯಮಾಯ ಸೋಮಂ ಯಮೋ ಯಮೋಽನುಷ್ಟುಪ್ :-

**ಯಮಾಯ ಸೋಮಂ ಸುನುತ ಯಮಾಯ ಜುಹುತಾ ಹವಿಃ ।**

**ಯಮಂ ಹ ಯಜ್ಞೋ ಗಚ್ಛತ್ಯಗ್ನಿದೂತೋ ಅರಂಕೃತಃ ॥**

ಅನೇನ ದಕ್ಷಿಣಸ್ಯಾಂ ಪಾಲಿಕಾಯಾಂ ಯಮಂ ॥

ತತ್ವಾಯಾಮೀತ್ಯಸ್ಯ ಶುನಶ್ಶೇಫೋ ವರುಣಸ್ತ್ರಿಷ್ಟುಪ್ :-

**ತತ್ವಾಯಾಮಿ----ಪ್ರಮೋಷೀಃ ॥**

ಅನೇನ ಪ್ರತೀಚ್ಯಾಂ ಪಾಲಿಕಾಯಾಂ ವರುಣಂ ॥

ಸೋಮೋ ಧೇನುಮಿತ್ಯಸ್ಯ ಗೌತಮಸ್ಸೋಮಸ್ತ್ರಿಷ್ಟುಪ್ :-

**ಸೋಮೋಧೇನುಂ ಸೋಮೋ ಅರ್ವಂತಮಾಶುಂ ಸೋಮೋ ವೀರಂ ಕರ್ಮಣ್ಯಂ ದದಾತಿ।**

**ಸಾದನ್ಯಂ ವಿದಥ್ಯಂ ಸಭೇಯಂ ಪಿತೃಶ್ರವಣಂ ಯೋ ದದಾಶದಸ್ಮೈ ॥**

ಇತ್ಯುದೀಚ್ಯಾಂ ಪಾಲಿಕಾಯಾಂ ಸೋಮಂ ॥

ಏವಮಾವಾಹನಾದಿಉಪಚಾರೈಃಸಮ್ಯಗಭ್ಯರ್ಚ್ಯ ಪಾಲಿಕಾ ಪಶ್ಚಾದ್ಭಾಗೇ ಪ್ರಾಙ್ಮುಖಸ್ತಿಷ್ಠನ್ ಉಪಸ್ಥಾನಂ ಕುರ್ಯಾತ್ ।

ತತ್ರ ಮಂತ್ರಃ :-

---

ಮೊಳಕೆಯಾಗಿ ಪೈರುಗಳು ದೊಡ್ಡದಾಗಿ ಬೆಳೆದು ನಮಗೆ ಫಲವನ್ನು ಕೊಡುವಂತೆ ಶುಭಕರ್ಮಗಳಲ್ಲಿ ಶಾಸ್ತ್ರೋಕ್ತವಾಗಿ ಬೀಜಗಳನ್ನು ಬಿತ್ತಿದರೆ ಅದು ಯಾವರೀತಿ ಫಲಿಸುತ್ತದೆಯೋ ಅದರಂತೆ ನಮ್ಮ ಮನೆತನವೂ ಅದೇ ರೀತಿಯಾಗಿ ಅಭಿವೃದ್ಧಿ ಹೊಂದಲೆಂಬ ಭಾವನೆಯೇ ಅಂಕುರಾರ್ಪಣ ಕರ್ಮ.

ಯಜಮಾನನು ತಾನು ಮಾಡುವ ಮುಂದಿನ ಕರ್ಮವು ಸಫಲವಾಗಿ ಯಾವಾಗಲೂ ಶುಭಪರಂಪರೆಯುಂಟಾಗುತ್ತಿರಲೆಂದು ಸಂಕಲ್ಪಿಸಿಕೊಂಡು ಭೂಮಿಯನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿ ದಾರಗಳಿಂದ ಸುತ್ತಲ್ಪಟ್ಟ 5 ಶರಾವೆಗಳಲ್ಲಿ (ಮಣ್ಣಿನ ತಟ್ಟೆ) ಅಕ್ಕಿಯನ್ನು ಹರಡಿ ಅದರ ಮೇಲೆ ಈ ಕ್ರಮದಲ್ಲಿಟ್ಟು ಅವುಗಳಲ್ಲಿ ಹುತ್ತದ ಮಣ್ಣು, ಕೆಸರಿನಮಣ್ಣು, ಬೆರಣಿ ಪುಡಿಗಳನ್ನು ಹಾಕಿ, ಗರಿಕೆ, ಅರಳಿಎಲೆ, ಶಿರೀಷಪುಷ್ಪ,

ದಿಶಾಂ ಪತೀನ್ನಮಸ್ಯಾಮಿ ಸರ್ವಕಾಮಫಲಪ್ರದಾನ್ ।

ಕುರ್ವಂತು ಸಫಲಂ ಕರ್ಮ ಕುರ್ವಂತು ಸತತಂ ಶುಭಂ ॥

ಇತಿ ಮಂತ್ರಂ ಜಪಿತ್ವಾ, ವ್ರೀಹಿಯವಮಾಷತಿಲಮುದ್ಗಸರ್ಷಪಾನ್ ತೋಯೇಷು ಪ್ರಕ್ಷಾಳ್ಯ, ಬ್ರಹ್ಮಜಜ್ಞಾನ ಮಂತ್ರೇಣ ಮಧ್ಯಮ ಪಾಲಿಕಾಯಾಮಾವಾಪ್ಯ, ಪ್ರಾಚ್ಯಾದಿ ಚತುರ್ದಿಕ್ಷು ಬೀಜಪ್ರತಿನಿಧಿತ್ವೇನ ತಾನ್ ಸಮಂತ್ರಂ ವಾಪಯೇತ್ ॥

ಬ್ರಹ್ಮಜಜ್ಞಾನಂ - ಮಧ್ಯಮ ಪಾಲಿಕಾಯಾಂ

ತತ್ರಮಂತ್ರಾಃ :-

ಯತ ಇಂದ್ರೇತ್ಯಸ್ಯ ಪ್ರಗಾಥ ಇಂದ್ರೋ ಬೃಹತೀ :-

ಯತ ಇಂದ್ರಭಯಾಮಹೇ ತತೋ ನೋ ಅಭಯಂ ಕೃಧಿ ।

ಮಘವಞ್ಛಗ್ಧಿ ತವ ತನ್ನ ಊತಿಭಿರ್ವಿದ್ವಿಷೋ ವಿಮೃಧೋ ಜಹಿ ॥

ಅನೇನ ಪ್ರಾಚ್ಯಾಂ ಪಾಲಿಕಾಯಾಂ ॥ ಅಯಂ ಬೀಜಾವಾಪಃ

ನಾಕೇ ಸುಪರ್ಣಮಿತ್ಯಸ್ಯ ಭಾರ್ಗವೋ ವೇನೋ ಯಮಸ್ತ್ರಿಷ್ಟುಪ್ :-

ನಾಕೇ ಸುಪರ್ಣಮುಪಯತ್ಪತಂತಂ ಹೃದಾ ವೇನಂತೋ ಅಭ್ಯಚಕ್ಷತ ತ್ವಾ ।

ಹಿರಣ್ಯಪಕ್ಷಂ ವರುಣಸ್ಯ ದೂತಂ ಯಮಸ್ಯ ಯೋನೌ ಶಕುನಂ ಭುರಣ್ಯುಂ ॥

ಅನೇನ ದಕ್ಷಿಣಸ್ಯಾಂ ಪಾಲಿಕಾಯಾಂ ॥ ಅಯಂ --ಪಃ

---

ಬಿಲ್ವಪತ್ರೆಗಳನ್ನು ಹಾಕಿ, ಒಂದೊಂದರ ಮೇಲೂ ಒಂದೊಂದು ದೇವತೆಯನ್ನು ಆವಾಹನೆ ಮಾಡಬೇಕು.

ಮಧ್ಯಮ ಪಾಲಿಕೆಯಲ್ಲಿ ಬ್ರಹ್ಮಾವಾಹನೆ. ಪೂರ್ವದಲ್ಲಿ ಇಂದ್ರ. ದಕ್ಷಿಣದಲ್ಲಿ ಯಮ. ಪಶ್ಚಿಮದಲ್ಲಿ ವರುಣ. ಉತ್ತರದಲ್ಲಿ ಸೋಮರನ್ನು ಆವಾಹನೆ ಮಾಡಿ, ಆಪಾಲಿಕೆಗಳಿಗೆ ಷೋಡಶೋಪಚಾರ ಪೂಜೆ ಮಾಡಿ, ಪಾಲಿಕೆಗಳ ಹಿಂದೆ ನಿಂತು ಉಪಸ್ಥಾನವನ್ನು ಮಾಡಬೇಕು.

''ದಿಶಾಂ ಪತೀನ್---ಶುಭಂ'' ಸಮಸ್ತ ಇಷ್ಟಾರ್ಥಗಳನ್ನು ಕೊಡುವ ದಿಕ್ಪತಿಗಳನ್ನು ನಮಸ್ಕರಿಸುತ್ತೇನೆ. ನಮಗೆ ಯಾವಾಗಲೂ ಒಳ್ಳೆಯ ಫಲವನ್ನು ಕೊಟ್ಟು ಸದಾ ಮಂಗಳವನ್ನುಂಟು ಮಾಡಲಿ. ಹೀಗೆಂದು ಪ್ರಾರ್ಥಿಸಿದ ನಂತರ ಮೊದಲೇ ನೆನೆಸಿಟ್ಟಿದ್ದ ಭತ್ತ, ಉದ್ದು, ಎಳ್ಳು, ಹೆಸರು, ಸಾಸಿವೆ ಮತ್ತು

ತತ್ವಾಯಾಮಿ ಶುನಶ್ಶೇಪೋ ವರುಣಸ್ತ್ರಿಷ್ಟುಪ್ :-

**ತತ್ವಾಯಾಮಿ----ಪ್ರಮೋಷೀಃ ॥**

ಅನೇನ ಪ್ರತೀಚ್ಯಾಂ ಪಾಲಿಕಾಯಾಂ ॥ ಅಯಂ----ಪಃ ।

ಸೋಮೋ ಧೇನುಮಿತ್ಯಸ್ಯ ಗೌತಮಸ್ಸೋಮಸ್ತ್ರಿಷ್ಟುಪ್ :-

**ಸೋಮೋ ಧೇನುಂ----ದದಾಶದಸ್ಮೈ ॥**

ಅನೇನ ಉದೀಚ್ಯಾಂ ಪಾಲಿಕಾಯಾಂ ॥ ಅಯಂ----ಪಃ ।

ಏವಂ ಚತುರ್ದಿಕ್ಷು ಆವಾಪ್ಯ, ಪದ್ಮಾಬ್ಜೈಃ ಪುಷ್ಪೈರಲಂಕುರ್ಯಾತ್ ॥

ಇತ್ಯೇಷೋಽಂಕುರಾರ್ಪಣ ಪ್ರಯೋಗಃ ॥

---

ಯವಧಾನ್ಯಗಳನ್ನು ಒಟ್ಟಿಗೆ ಸೇರಿಸಿ, ಸ್ವಲ್ಪ ಸ್ವಲ್ಪವಾಗಿ (2) ಯತ ಇಂದ್ರ ಎಂಬ ಮಂತ್ರವನ್ನು ಹೇಳುತ್ತಾ ಇಂದ್ರನನ್ನು ಸ್ತುತಿಸುತ್ತಾ ಮಧ್ಯಮ ಪಾಲಿಕೆಯಲ್ಲಿ ಹಾಕಬೇಕು. (1) 'ಬ್ರಹ್ಮಜ್ಞಾನ' ಮಂತ್ರವನ್ನು ಪಠಿಸುತ್ತಾ ಮಧ್ಯಮಪಾಲಿಕೆಯಲ್ಲೂ, 'ತತ್ವಾಯಾಮಿ' ಮಂತ್ರದಿಂದ ಪಶ್ಚಿಮಪಾಲಿಕೆಯಲ್ಲೂ, 'ಸೋಮೋ ಧೇನುಂ' ಮಂತ್ರದಿಂದ ಉತ್ತರ ಪಾಲಿಕೆಯಲ್ಲೂ ಬೀಜಗಳನ್ನು ಬಿತ್ತಬೇಕು.

ಈ ರೀತಿಯಾಗಿ ಬೀಜಗಳನ್ನು ಬಿತ್ತಿದ ಮೇಲೆ ಪುನಃ ಹುತ್ತದ ಮಣ್ಣು, ಬೆರಣಿ ಪುಡಿಗಳನ್ನು ಅವುಗಳ ಮೇಲೆ ಹಾಕಿ, ಪುಷ್ಪಾದಿಗಳಿಂದ ಅಲಂಕರಿಸಿಟ್ಟಿದ್ದು, ಕರ್ಮಸಮಾಪ್ತಿಯಾದೊಡನೆ ಆ ಶರಾವೆಗಳನ್ನು ಜಲದಲ್ಲಿ ಬಿಡುವುದು.

# ನಾಂದೀ ಪ್ರಯೋಗಃ

ಅಥೇದಾನೀಮಾಭ್ಯುದಯಿಕ ವಿಧಿರಭಿಧೀಯತೇ- ಏವಮುಕ್ತ ಪ್ರಕಾರೇಣ ಸ್ವಸ್ತಿವಾಚನಾದಿಕಂ ಕೃತ್ವಾ, ಗರ್ಭಾಧಾನಾದಿ ಸಂಸ್ಕಾರೇಷು ಕೇಷುಚಿದನ್ಯೇಷು ಚ ತದಂಗಭೂತಂ ನಾಂದೀಶ್ರಾದ್ಧಂ ಕುರ್ಯಾತ್ ॥ ಅಥ ಯಜಮಾನಃ ಕೃತಾಚಮನಃ ಕೃತಪ್ರಾಣಾಯಾಮೋ ದೇಶಕಾಲೌ ಕಥಯಿತ್ವಾ ಅಮುಕಕರ್ಮಕರ್ತುಂ ತದಂಗ ನಾಂದೀಶ್ರಾದ್ಧಂ ಕರಿಷ್ಯ ಇತಿ ಸಂಕಲ್ಪ್ಯ, ತದಂಗ ಮಾತೃಕಾಪೂಜಾಂ ಕುರ್ಯಾತ್ । ಸೌವರ್ಣರಾಜತತಾಮ್ರಾದಿಪಾತ್ರೇ ವೇಣ್ವಾದಿಶೂರ್ಪೇ ವಾ ನವವಸ್ತ್ರಂ ಪ್ರಸಾರ್ಯ ತತ್ರ ತಂಡುಲಾನೋಪ್ಯ ಸುವರ್ಣಾದಿಕೃತಪ್ರತಿಮಾಃ ಪ್ರಾಕ್ಸಂಸ್ಥಮುದಕ್ಸಂಸ್ಥಂ ವಾ ದೇವತಾ ಸಂಖ್ಯಯಾ ಪ್ರತ್ಯೇಕಂ ನಿಧಾಯ, ತತಸ್ತಾಸು ಗೌರ್ಯಾದಿ ಷೋಡಶ ಮಾತೄಃ ಬ್ರಾಹ್ಮ್ಯಾದಿ ಸಪ್ತ ಮಾತೄಃ ದುರ್ಗಾಂ ಗಣಪತಿಂ ಚ ದ್ವಿತೀಯಾ ವಿಭಕ್ತ್ಯೋಕ್ತ್ವಾವಾಹಯೇತ್ ॥

ಗೌರೀಂ, ಪದ್ಮಾಂ, ಶಚೀಂ, ಮೇಧಾಂ, ಸಾವಿತ್ರೀಂ, ವಿಜಯಾಂ, ಜಯಾಂ, ದೇವಸೇನಾಂ, ಸ್ವಧಾಂ, ಸ್ವಾಹಾಂ, ಮಾತರಂ, ಲೋಕಮಾತರಂ, ಧೃತಿಂ, ಪುಷ್ಟಿಂ, ತುಷ್ಟಿಂ, ಆತ್ಮನಃ ಕುಲದೇವತಾಂ । ಬ್ರಾಹ್ಮೀಂ, ಮಾಹೇಶ್ವರೀಂ, ಕೌಮಾರೀಂ, ವೈಷ್ಣವೀಂ, ವಾರಾಹೀಂ ಮಾಹೇಂದ್ರೀಂ, ಚಾಮುಂಡಾಂ, ದುರ್ಗಾಂ, ಗಣಪತಿಂ ಚ । ಅವಾಹಯಾಮೀತ್ಯಾವಾಹ್ಯ ಗೌರ್ಯಾದ್ಯಾವಾಹಿತದೇವತಾಃ ಧ್ಯಾಯಾಮೀತಿ ಧ್ಯಾತ್ವಾ, ಗೌರ್ಯಾದಿ ದೇವತಾಭ್ಯೋ ನಮಃ ಇತಿ ಚತುರ್ಥೀ ವಿಭಕ್ತ್ಯಾ ಸಿಂಹಾಸನಮಿತ್ಯಾದಿ ಷೋಡಶೋಪಚಾರೈಸ್ಸಂಪೂಜಯೇತ್ ॥

ಏಕಸ್ಮಿನ್ಪಾತ್ರೇ ಅಕ್ಷತಾನ್ ನಿಕ್ಷಿಪ್ಯ, ಸದೂರ್ವಾಂಕುರಾಕ್ಷತಾನ್ ಜಲಂ ಚ ಹಸ್ತೇನಾದಾಯ, ಸತ್ಯವಸುಸಂಜ್ಞಕಾ ವಿಶ್ವೇದೇವಾಃ ನಾಂದೀಮುಖಾಃ ಭೂರ್ಭುವಸ್ವರಿದಂ ವಃ ಪಾದ್ಯಂ ನಾಂದೀ॥ ಮಾತೃಪಿತಾಮಹೀಪ್ರಪಿತಾಮಹ್ಯಃ -ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ವರಿದಂ ವಃ

---

**ನಾಂದೀ**

**ನಾಂದೀಶ್ರಾದ್ಧ:-** ಮನೆಯಲ್ಲಿ ಯಾವುದೊಂದು ಮಂಗಳಕಾರ್ಯವು ನಡೆದರೂ ಪಿತೃಗಳೆಲ್ಲರೂ ಸೂಕ್ಷ್ಮರೂಪದಿಂದ ಬಂದು ನಮ್ಮ ಮನೆಯಲ್ಲಿ ಇದ್ದುಕೊಂಡು ನಾವು ಮಾಡುವ ಕಾರ್ಯವನ್ನು ಸಂತೋಷದಿಂದ ಅವಲೋಕಿಸುತ್ತಾರೆ. ಹಾಗೂ ವಂಶಕ್ಕೆ ಶುಭವನ್ನು ಕೋರುತ್ತಾರೆಂಬುದು ನಮ್ಮ ನಂಬಿಕೆ. ಅಂತಹ ಪಿತೃಗಳನ್ನು ಪೂಜಿಸಿ ಸತ್ಕರಿಸುವುದೇ ಈ ನಾಂದಿಯ ಮುಖ್ಯ ಉದ್ದೇಶ. ನಾಂದೀ ಎಂದರೆ ಶುಭಕರ್ಮ. ಆ ಕಾಲಕ್ಕೆ ಪಿತೃಗಳನ್ನು ಉದ್ದೇಶಿಸಿ ಮಾಡುವ ಶ್ರಾದ್ಧ ನಾಂದೀಶ್ರಾದ್ಧ.

ಪಾದ್ಯಂ ನಾಂದೀ ॥ ಪಿತೃಪಿತಾಮಹಪ್ರಪಿತಾಮಹಾಃ -ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ಸ್ವರಿದಂ ವಃ ಪಾದ್ಯಂ ನಾಂದೀ ॥ ಮಾತಾಮಹಮಾತುಃಪಿತಾಮಹ ಮಾತುಃಪ್ರಪಿತಾ ಮಹಾಸ್ಸಪತ್ನೀಕಾಃ-ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ಸ್ವರಿದಂ ವಃ ಪಾದ್ಯಂ ನಾಂದೀ॥ ಗೌರ್ಯಾದಿಷೋಡಶಮಾತರೋ ಬ್ರಾಹ್ಮ್ಯಾದಿಸಪ್ತಮಾತರಶ್ಚ ನಾಂದೀಮುಖಾಃ ಭೂರ್ಭುವಸ್ಸ್ವರಿದಂ ವಃ ಪಾದ್ಯಂ ನಾಂದೀ ॥ ಇತಿ ದೂರ್ವಾಂಕುರಾಕ್ಷತಯುತಜಲಂ ತತ್ಪಾತ್ರೇ ನಿಷಿಂಚೇತ್ ॥

ಪುನಸ್ಸದೂರ್ವಾಂಕುರಾಕ್ಷತಾ ಜಲಂ ಚ ಹಸ್ತೇನಾದಾಯ ಸತ್ಯವಸುಸಂಜ್ಞಕಾ ವಿಶ್ವೇದೇವಾಃ ನಾಂದೀಮುಖಾಃ ಭೂರ್ಭುವಸ್ಸ್ವರಿದಮಾಸನ ಗಂಧಾದ್ಯುಪಚಾರಕಲ್ಪನಂ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಮಾತೃಪಿತಾಮಹೀಪ್ರಪಿತಾಮಹ್ಯಃ- ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ಸ್ವರಿದಮಾಸನಗಂಧಾದ್ಯುಪಚಾರಕಲ್ಪನಂ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಪಿತೃಪಿತಾಮಹ ಪ್ರಪಿತಾಮಹಾಃ-ಗೋತ್ರಾಃ ನಾಂದಿಮುಖಾಃ ಭೂರ್ಭುವಸ್ಸ್ವರಿದ ಮಾಸನಗಂಧಾದ್ಯುಪಚಾರಕಲ್ಪನಂ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥

ಮಾತಾಮಹಮಾತುಃಪಿತಾಮಹಮಾತುಃಪ್ರಪಿತಾಮಹಾಸ್ಸಪತ್ನೀಕಾಃ -ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ಸ್ವರಿದಮಾಸನಗಂಧಾದ್ಯುಪಚಾರಕಲ್ಪನಂ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಗೌರ್ಯಾದಿಷೋಡಶಮಾತರೋ ಬ್ರಾಹ್ಮ್ಯಾದಿಸಪ್ತಮಾತರಶ್ಚ ನಾಂದೀಮುಖಾಃ ಭೂರ್ಭುವಸ್ಸ್ವರಿದಮಾಸನಗಂಧಾದ್ಯುಪಚಾರಕಲ್ಪನಂ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥

ಇತಿ ತದ್ದೂರ್ವಾಂಕುರಾಕ್ಷತಯುತಜಲಂ ತತ್ಪಾತ್ರೇ ನಿಕ್ಷಿಪೇತ್ ॥

ಪುನಃ ಪೂರ್ವವತ್ ಸದೂರ್ವಾಂಕುರಾಕ್ಷತಾ ಜಲಂ ಚ ಹಸ್ತೇನಾದಾಯ, ಸತ್ಯವಸುಸಂಜ್ಞಕಾವಿಶ್ವೇದೇವಾಃ ನಾಂದೀಮುಖಾಃ ಭೂರ್ಭುವಸ್ಸ್ವರಿದಂ ದಾಸ್ಯಮಾನಯುಗ್ಮ ಬ್ರಾಹ್ಮಣಭೋಜನಪರ್ಯಾಪ್ತಮಾಮಂ ಹಿರಣ್ಯಂ ವಾಽಮೃತರೂಪೇಣ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಮಾತೃಪಿತಾಮಹೀ ಪ್ರಪಿತಾಮಹ್ಯಃ ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ಸ್ವರಿದಂದಾಸ್ಯಮಾನಯುಗ್ಮ ಬ್ರಾಹ್ಮಣಭೋಜನ ಪರ್ಯಾಪ್ತಮಾಮಂ

---

ತಟ್ಟೆ ಅಥವಾ ಹೊಸಮರದಲ್ಲಿ ಹೊಸವಸ್ತ್ರವನ್ನು ಹಾಸಿ ಆದರಲ್ಲಿ ಅಕ್ಕಿಯನ್ನು ಹರಡಿ ಸುವರ್ಣಾದಿ 25 ಪ್ರತಿಮೆಗಳನ್ನಿಟ್ಟು ಒಂದೊಂದು ಪ್ರತಿಮೆಯಲ್ಲೂ ಗೌರೀ, ಪದ್ಮಾ, ಶಚೀ, ಮೇಧಾ, ಸಾವಿತ್ರೀ, ವಿಜಯಾ, ಜಯಾ, ದೇವಸೇನಾ, ಸ್ವಧಾ, ಸ್ವಾಹಾ, ಮಾತೃ ಲೋಕಮಾತೃ ಧೃತಿ, ಪುಷ್ಟಿ, ತುಷ್ಟಿ, ತನ್ನ ಕುಲದೇವತೆ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ ವಾರಾಹೀ, ಇಂದ್ರಾಣೀ, ಚಾಮುಂಡಾ, ದುರ್ಗಾ, ಗಣಪತಿ ಈ ದೇವತೆಗಳನ್ನು ಆವಾಹನೆ ಮಾಡಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಹಿರಣ್ಯಂವಾಽಮೃತರೂಪೇಣ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಪಿತೃಪಿತಾಮಹ ಪ್ರಪಿತಾಮಹಾಃ- ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ವರಿದಂ ದಾಸ್ಯಮಾನಯುಗ್ಮ ಬ್ರಾಹ್ಮಣ ಭೋಜನ ಪರ್ಯಾಪ್ತಮಾಮಂ ಹಿರಣ್ಯಂ ವಾಽಮೃತರೂಪೇಣ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಮಾತಾಮಹಮಾತುಃಪಿತಾಮಹಮಾತುಃಪ್ರಪಿತಾಮಹಾಸ್ಸಪತ್ನೀಕಾಃ - ಗೋತ್ರಾಃ ನಾಂದೀಮುಖಾಃ ಭೂರ್ಭುವಸ್ವರಿದಂದಾಸ್ಯಮಾನಯುಗ್ಮಬ್ರಾಹ್ಮಣಭೋಜನ ಪರ್ಯಾಪ್ತಮಾಮಂಹಿರಣ್ಯಂವಾಽಮೃತರೂಪೇಣ

ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಗೌರ್ಯಾದಿಷೋಡಶಮಾತರೋ ಬ್ರಾಹ್ಮ್ಯಾದಿ ಸಪ್ತಮಾತರಶ್ಚ ನಾಂದೀಮುಖಾಃ ಭೂರ್ಭುವಸ್ವರಿದಂ ದಾಸ್ಯಮಾನಯುಗ್ಮಬ್ರಾಹ್ಮಣಭೋಜನಪರ್ಯಾಪ್ತಮಾಮಂ ಹಿರಣ್ಯಂವಾಽಮೃತರೂಪೇಣ ಸ್ವಾಹಾ ನಮಶ್ಚ ವೃದ್ಧಿರ್ನಾಂದೀ ॥ ಇತಿ ತದ್ದೂರ್ವಾಂಕುರಾಕ್ಷತಯುತಜಲಂ ತತ್ಪಾತ್ರೇ ನಿಕ್ಷಿಪೇತ್ ॥

ತತ ಉಪಾಸ್ಮೈ ಗಾಯತೇತಿ ಪಂಚರ್ಚಂ ಜಪಿತ್ವಾ

ಉಪಾಸ್ಮೈಗಾಯತಾ ನರ ಇತಿ ಪಂಚರ್ಚಸ್ಯ ಸೂಕ್ತಸ್ಯ ಕಾಶ್ಯಪೋಽಸಿತ ಋಷಿಃ ಪವಮಾನಸ್ಸೋಮೋ ದೇವತಾ ಗಾಯತ್ರೀ ಛಂದಃ :-

ಉಪಾಸ್ಮೈ ಗಾಯತಾ ನರಃ ಪವಮಾನಾಯೇಂದವೇ । ಅಭಿದೇವಾ ಇಯಕ್ಷತೇ ॥

ಅಭಿ ತೇ ಮಧುನಾ ಪಯೋಽಥರ್ವಾಣೋ ಅಶಿಶ್ರಯುಃ । ದೇವಂ ದೇವಾಯ ದೇವಯು॥

ಸನಃ ಪವಸ್ವ ಶಂ ಗವೇ ಶಂ ಜನಾಯ ಶಮರ್ವತೇ । ಶಂ ರಾಜನ್ನೋಷಧೀಭ್ಯಃ ॥

ಬಭ್ರವೇನು ಸ್ವತವಸೇಽರುಣಾಯ ದಿವಿಸ್ಪೃಶೇ । ಸೋಮಾಯ ಗಾಥಮರ್ಚತ ॥

ಹಸ್ತಚ್ಯುತೇಭಿರದ್ರಿಭಿಸ್ಸುತಂ ಸೋಮಂ ಪುನೀತನ । ಮಧಾವಾಧಾವತಾಮಧು ॥

---

ಪೂಜೆಯಾದ ನಂತರ ಸಂಸ್ಕಾರ್ಯನ ಮಾತಾಪಿತೃಗಳಿಗೆ ತರ್ಪಣವನ್ನು ಕೊಡಬೇಕು.

ಸಂಸ್ಕಾರ್ಯನು ತಂದೆಯುಳ್ಳವನಾಗಿದ್ದರೆ ಈ ತಂದೆಯೇ ತರ್ಪಣವನ್ನು ಕೊಡಬೇಕು.

ಸಂಸ್ಕಾರ್ಯನು ತಂದೆಯಿಲ್ಲದವನಾಗಿದ್ದು ಚಿಕ್ಕಪ್ಪ ದೊಡ್ಡಪ್ಪಂದಿರೋ ಸೋದರಮಾವನೋ ಅಥವಾ ಬೇರೆ ಯಾರೇ ಇವನಿಗೆ ಸಹಾಯಕರಾಗಿದ್ದು ಹಸೆಮಣೆಮೇಲೆ ಕೂಡವವರಾಗಿದ್ದರೆ ಆಗ ಸಂಸ್ಕಾರ್ಯನ ಮಾತಾಪಿತೃಗಳ ಹೆಸರಿನಲ್ಲಿ ತರ್ಪಣವನ್ನು ಕೊಡಬೇಕು. ಸಂಸ್ಕಾರ್ಯನ ಸಹಾಯಾರ್ಥ

ನಾಂದೀಶ್ರಾದ್ಧಸಂಪೂರ್ಣತಾಸಿದ್ಧಯೇ ದ್ರಾಕ್ಷಾಮಲಕಂ ತತ್ಪ್ರತಿನಿಧಿತ್ವೇನ ದ್ರವ್ಯಂ ವಾ ದಕ್ಷಿಣಾಂ ದತ್ವಾ ಪ್ರಜಾಪತೇ ನ ತ್ವದಿತಿ ಜಪೇತ್ ।

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾ ಬಭೂವ ।

ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ॥

ಅಥೇಳಾವಾಚನಂ :-॥

ಇಳಾಮಗ್ನೇ ಪುರುದಂಸಂ ಸನಿಂ ಗೋಃಶಶ್ವತ್ತಮಂ ಹವಮಾನಾಯಸಾಧ ।

ಸ್ಯಾನ್ನಸ್ಸೂನುಸ್ತನಯೋ ವಿಜಾವಾಗ್ನೇ ಸಾತೇ ಸುಮತಿರ್ಭೂತ್ವಸ್ಮೇ ॥ ಇಳ ಏಹಿ ॥

ಅದಿತಿ ರ್ದ್ಯೌರದಿತಿರಂತರಿಕ್ಷ ಮದಿತಿ ರ್ಮಾತಾ ಸ ಪಿತಾ ಸಪುತ್ರಃ ।

ವಿಶ್ವೇದೇವಾ ಅದಿತಿಃ ಪಂಚ ಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥ ಅದಿತ ಏಹಿ ॥

ಪ್ರಣೋ ದೇವೀ ಸರಸ್ವತೀ ವಾಜೇಭಿರ್ವಾಜಿನೀವತೀ ।

ಧೀನಾಮವಿತ್ರ್ಯವತು ॥ ಸರಸ್ವತ್ಯೇಹಿ ॥ ಶೋಭನಂ ಶೋಭನಂ ॥

ಇಳಾಮುಪಹ್ವಯತೇ ಪಶವೋ ವಾ ಇಳಾ । ಪಶೂನೇವ

ತದುಪಹ್ವಯತೇ । ಪಶೂ ಯಜಮಾನೇ ದಧಾತಿ ದಧಾತಿ ॥

---

ವಾಗಿ ಹಸೆಯ ಮೇಲೆ ಕೂತಿರುವವನ ಮಾತಾಪಿತ್ರಾದಿಗಳಿಗೆ ತರ್ಪಣವಿಲ್ಲ. ಕೈಯಲ್ಲಿ ದೂರ್ವಾಕ್ಷತೆಗಳನ್ನು ತೆಗೆದುಕೊಂಡು ಎಡಗೈಯಿಂದ ನೀರನ್ನು ಹಾಕಿಕೊಳ್ಳುತ್ತಾ ''ಸತ್ಯವಸು ಸಂಜ್ಞಕಾ----ನಾಂದೀ'' ತಾಯಿ, ಅಜ್ಜಿ, ಮುತ್ತಜ್ಜಿಯರ ಗೋತ್ರಗಳನ್ನು ಹೇಳಿಕೊಳ್ಳುತ್ತಾ ಬಿಡುವುದು. ಹಾಗೆಯೇ ತಂದೆ, ತಾತ, ಮುತ್ತಾತಂದಿರ ಗೋತ್ರಗಳನ್ನು ಹೇಳುತ್ತಾ ನೀರುಬಿಡುವುದು. ಸಂಸ್ಕಾರ್ಯನ ತಾಯಿಯ ತಂದೆ, ತಾತ, ಮುತ್ತಾತಂದಿರ ಗೋತ್ರಗಳನ್ನು ಹೇಳಿ ಬಿಡುವುದು. 'ಗೌರ್ಯಾದಿ ಷೋಡಶ--- ನಾಂದೀ' ಎಂದು ಹೇಳುತ್ತಾ ಆ ದೂರ್ವಾಕ್ಷತೆಗಳನ್ನು ತಟ್ಟೆಯಲ್ಲಿ ಬಿಡುವುದು.

ಮತ್ತೇ ಕೈಯಲ್ಲಿ ದೂರ್ವಾಕ್ಷತೆಗಳನ್ನು ತೆಗೆದುಕೊಂಡು ನೀರನ್ನು ಹಾಕಿಕೊಳ್ಳುತ್ತಾ ''ಸತ್ಯವಸು---ಭೂರ್ಭುವಸ್ವರಿದಮಾಸಂ'' ಎಂದು ಹೇಳುತ್ತಾ ಬಿಡಬೇಕು.

## ಅಥ ಪ್ರಾರ್ಥನಾ

ಮಾತಾ ಪಿತಾಮಹೀ ಚೈವ ತಥೈವ ಪ್ರಪಿತಾಮಹೀ ।
ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ॥
ಮಾತಾಮಹಸ್ತತ್ಪಿತಾ ಚ ಪ್ರಮಾತಾ ಮಹಕಾದಯಃ ।
ಏತೇ ಭವಂತು ಮೇ ಪ್ರೀತಾಃ ಪ್ರಯಚ್ಛಂತು ಚ ಮಂಗಳಂ ॥

ಇತಿ ಕೃತಾಂಜಲಿಸ್ಸಂಪ್ರಾರ್ಥ್ಯ, ಪ್ರಣಿಪತ್ಯ, ಅನೇನ ನಾಂದೀಶ್ರಾದ್ಧೇನ ನಾಂದೀಮುಖದೇವತಾಃ ಪ್ರೀಯಂತಾಂ ವೃದ್ಧಿರಸ್ತ್ವಿತ್ಯುಕ್ತ್ವಾ ಗೌರ್ಯಾದಿದೇವತಾ ವಿಸರ್ಜಯೇತ್ ॥

॥ ಇತ್ಯೇಷ ನಾಂದೀ ಪ್ರಯೋಗಃ ॥

---

ಕೈಯಲ್ಲಿ ದೂರ್ವಾಕ್ಷತೆಗಳನ್ನು ತೆಗೆದುಕೊಂಡು ಎಡಗೈಯಿಂದ ನೀರನ್ನು ಹಾಕಿಕೊಂಡು ಸತ್ಯವಸು ಸಂಜ್ಞಕರಾದ ನಾಂದೀ ದೇವತೆಗಳಿಗೂ, ತಾಯಿ, ಅಜ್ಜಿ, ಮುತ್ತಜ್ಜಿಯವರ ಗೋತ್ರಗಳನ್ನು ಹೇಳುತ್ತಾ ತಂದೆ, ತಾತ, ಮುತ್ತಾತಂದಿರು ಅವರ ಪತ್ನಿಯರುಗಳ ಗೋತ್ರಗಳನ್ನು ಹೇಳುತ್ತಾ, ಗೌರ್ಯಾದಿ ಆವಾಹಿತ ದೇವತೆಗಳಿಗೆಲ್ಲಾ ಪಾದ್ಯವನ್ನು ಕೊಡುತ್ತೇನೆಂದು ಹೇಳುತ್ತಾ ದೂರ್ವಾಕ್ಷತೋದಕಗಳನ್ನು ಬಿಟ್ಟು ಬಿಡುವುದು.

ಮತ್ತೆ ಕೈಯಲ್ಲಿ ದೂರ್ವಾಕ್ಷತೆಗಳನ್ನು ತೆಗೆದುಕೊಂಡು ನೀರನ್ನು ಹಾಕಿ ಕೊಳ್ಳುತ್ತಾ, ಮೇಲ್ಕಂಡವರಿಗೆಲ್ಲಾ ಆಸನ ಗಂಧಾದಿ ಉಪಚಾರಗಳನ್ನು ಕಲ್ಪಿಸುತ್ತೇನೆಂದು ಹೇಳುತ್ತಾ ದೂರ್ವಾಕ್ಷತೆಗಳನ್ನು ತಟ್ಟೆಯಲ್ಲಿ ಬಿಡುವುದು. ಪುನಃ ದೂರ್ವಾಕ್ಷತೆಗಳನ್ನು ತೆಗೆದುಕೊಂಡು ನೀರನ್ನು ಹಾಕಿಕೊಳ್ಳುತ್ತಾ, ಮೇಲ್ಕಂಡವರಿಗೆಲ್ಲಾ ಎಂದರೆ ಗೌರ್ಯಾದಿ 16 ಜನ ಮಾತೆಯರು, ಬ್ರಾಹ್ಮ್ಯಾದಿ ಸಪ್ತಮಾತೃಗಳು, ದುರ್ಗಾ, ಗಣಪತಿ, ಮಾತೃವರ್ಗ, ಪಿತೃವರ್ಗ ಸಪತ್ನೀಕ ಮಾತಾಮಹವರ್ಗ, ಇವರಿಗೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ಇಬ್ಬರು ಬ್ರಾಹ್ಮಣರ ಭೋಜನಕ್ಕೆ ಸಾಕಾಗುವಷ್ಟು ಪದಾರ್ಥಗಳಿಗೆ ಸರಿಹೋಗುವಷ್ಟು, ಆಮದ್ರವ್ಯ ಎಂದರೆ ಅಕ್ಕಿ, ಬೇಳೆ ಇತ್ಯಾದಿ ಅಡಿಗೆ ಸಾಮಾನುಗಳು ಅಥವಾ ಸುವರ್ಣವನ್ನು ಕೊಡುವೆನೆಂದು ಬಿಡಬೇಕು.

ನಂತರ ಮಾಡಿದ ನಾಂದೀಶ್ರಾದ್ಧದ ಪೂರ್ಣಫಲಪ್ರಾಪ್ತಿಗಾಗಿ ದ್ರಾಕ್ಷಿ ಅಥವಾ ನೆಲ್ಲಿಕಾಯಿಗಳಿಗೆ ಸಮನಾದಷ್ಟು ದಕ್ಷಿಣೆಯನ್ನು ಕೊಡುವೆನೆಂದು, ''ಉಪಾಸ್ಮೈಗಾಯತ'' ಎಂಬ ವರ್ಗವನ್ನೂ, ''ಪ್ರಜಾಪತೇ'' ಎಂಬ ಋಕ್ಕನ್ನೂ ಹೇಳಬೇಕು. ಮತ್ತು ದಕ್ಷಿಣೆಯನ್ನು ಕೊಡಬೇಕು.

ನಂತರ ಮೂರು ಮಂತ್ರಗಳಿಂದ ಇಳಾವಾಚನವೆಂದು ಹೇಳಿ, ಇಳಾ ದೇವತೆ, ಅದಿತಿ ಮತ್ತು ಸರಸ್ವತಿಯರನ್ನು ಇಲ್ಲಿ ಬನ್ನಿರೆಂದೂ, ನಮಗೆ ಶುಭಪರಂಪರೆಯುಂಟಾಗಲೆಂದೂ ಪ್ರಾರ್ಥಿಸುತ್ತಾ, ಬೆಳ್ಳಿನಾಣ್ಯದಿಂದ ನಾಂದೀ ಆವಾಹಿತರಾದ ಭಾಜನದ ಕೆಳಗೆ ಶಬ್ದ ಮಾಡಬೇಕು. ಮಾತಾಪಿತ್ರಾದಿಗಳನ್ನು ಪ್ರಾರ್ಥಿಸುತ್ತಾ ಈ ನಾಂದೀ ದೇವತೆಗಳು ಸುಪ್ರೀತರಾಗಲೆಂದು ಅಕ್ಷತೋದಕವನ್ನು ಬಿಡುವುದು. ನಾಂದೀ ದೇವತಾಪ್ರೀತಿಗಾಗಿ ಯಥಾ ಶಕ್ತಿ ದಕ್ಷಿಣಾದಾನ ಮಾಡಬೇಕು. ಕರ್ಮಸಮಾಪ್ತಿಯಾದ ನಂತರ ನಾಂದೀ ದೇವತೆಗಳನ್ನು ವಿಸರ್ಜನೆ ಮಾಡಬೇಕು.

# ಕೌತುಕಬಂಧನ ಪ್ರಯೋಗಃ

ವಿವಾಹಾದಿಶುಭಕರ್ಮಣಿ ಪೂರ್ವ ದಿನೇ ರಾತ್ರೌ ಸಾಂಕುರೇ ಪಾಲಿಕಾಯುಕ್ತೇ ಸ್ಥಳೇ ಮಂಗಳತೂರ್ಯನಾದೇ ಕೃತೇ ಕೌತುಕಬಂಧನಂ ಕುರ್ಯಾತ್ ॥ ತತ್ರಾಯಂ ಕ್ರಮಃ-

ಆಚಾರ್ಯಸ್ತಿಥ್ಯಾದಿಕಂ ಸಂಕೀರ್ತ್ಯ ಅಮುಕಕರ್ಮಕರ್ತುಂ ಆದೌ ಶ್ರೀಪರಮೇಶ್ವರಪ್ರೀತ್ಯರ್ಥಂ, ಕೌತುಕಬಂಧನಂ ಕರಿಷ್ಯಾಮೀತಿ ಸಂಕಲ್ಪ್ಯ, ನವಸಪ್ತ ಪಂಚಸ್ವನ್ಯತಮಸಂಖ್ಯಾಕಾಃ ಕುಶಶಲಾಕಾ ಗೃಹೀತ್ವಾ, ಚತುರಂಗುಲಾಗ್ರಂ ದ್ವ್ಯಂಗುಳಗ್ರಂಥಿಂ ಷೋಡಶಾಂಗುಲಮೂಲಂ ಯಥಾ ಭವತಿ ತಥಾ ಪವಿತ್ರವದ್ಬಧ್ವಾ, ಏವಂಕೃತಂ ಕೂರ್ಚಂ ಪ್ರಾಗಗ್ರಂ ನಿಧಾಯ, ತತ್ರ ಕುಂಭಂ ಸಂಸ್ಥಾಪ್ಯ, ಸಾಕ್ಷತಕಾಂಸ್ಯಪಾತ್ರೇ ಪಂಚಗುಣೀಕೃತಂ ಕಾರ್ಪಾಸಸೂತ್ರಂ ನಿಧಾಯ, ತತ್ಸಮೀಪೇ ಯಜಮಾನಮುಪವೇಶ್ಯ ಕುಶಹಸ್ತೈಃ ಋತ್ವಿಗ್ಭಿಸ್ಸಹ ಕುಂಭೋದಕೇನ ತತ್ಸೂತ್ರಂ ಸಮಂತ್ರಮಭಿಷಿಂಚೇತ್ ॥ ॥ ತತ್ರ ಮಂತ್ರಾಃ ॥

ತತ್ಸವಿತುರಿತ್ಯಸ್ಯ ವಿಶ್ವಾಮಿತ್ರಸ್ಸವಿತಾ ಗಾಯತ್ರೀ :-

ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ॥

ಅಗ್ನಿಮೀಳೇ ಮಧುಚ್ಛಂದಾ ಅಗ್ನಿರ್ಗಾಯತ್ರೀ :-

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವ ಮೃತ್ವಿಜಂ ।
ಹೋತಾರಂ ರತ್ನಧಾತಮಂ ॥

---

### ಕೌತುಕಬಂಧನ

ವಿವಾಹಾದಿ ಶುಭಕರ್ಮಗಳನ್ನು ಮಾಡುವಾಗ ಆ ಹಿಂದಿನ ದಿನ ಪ್ರಾತಃ ಅಥವಾ ರಾತ್ರೆ ಅಂಕುರಾರ್ಪಣವನ್ನು ಮಾಡಿದ ಸ್ಥಳದಲ್ಲಿ ಮಂಗಳವಾದ್ಯವು ನಡೆಯುತ್ತಿರಲಾಗಿ ಕೌತುಕ ಬಂಧನವೆಂಬ ಕರ್ಮವನ್ನು ಮಾಡಬೇಕು.

ಇಷೇ ತ್ವೋರ್ಜೇ ತ್ವಾವಾಯವಸ್ಥೋಪಾಯವಸ್ಥದೇವೋವಸ್ಸವಿತಾ ಪ್ರಾರ್ಪಯತು

ಶ್ರೇಷ್ಠತಮಾಯ ಕರ್ಮಣೇ ॥

ಅಗ್ನ ಆಯಾಹಿ ವೀತಯೇ ಗೃಣಾನೋ ಹವ್ಯದಾತಯೇ ।

ನಿಹೋತಾ ಸತ್ಸಿ ಬರ್ಹಿಷಿ ॥

ಶಂನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ ।

ಶಂ ಯೋರಭಿಸ್ರವಂತು ನಃ ॥

ಆಪೋ ಹಿಷ್ಠೇತಿ ನವರ್ಚಸ್ಯ ಸೂಕ್ತಸ್ಯ ಅಂಬರೀಷಸ್ಸಿಂಧುದ್ವೀಪ ಆಪೋ ಗಾಯತ್ರೀ, ಪಂಚಮೀ ವರ್ಧಮಾನಾ ಸಪ್ತಮೀ ಪ್ರತಿಷ್ಠಾ ಅಂತ್ಯೇ ದ್ವೇ ಅನುಷ್ಟುಭೌ :-

ಆಪೋ ಹಿಷ್ಠಾ ಮಯೋಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ ॥ ಯೋ ವಶ್ಶಿವತಮೋ ರಸಸ್ತಸ್ಯ ಭಾಜಯತೇಹ ನಃ । ಉ ಶತೀರಿವ ಮಾತರಃ ॥ ತಸ್ಮಾ ಅರಂಗ ಮಾಮವೋ ಯಸ್ಯಕ್ಷಯಾಯ ಜಿನ್ವಥ । ಆಪೋಜನಯಥಾ ಚ ನಃ ॥ ಶಂನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿ ಸ್ರವಂತು ನಃ ॥ ಈಶಾನಾ ವಾರ್ಯಾಣಾಂ ಕ್ಷಯಂತೀಶ್ಚರ್ಷಣೀನಾಮ್ । ಅಪೋ ಯಾಚಾಮಿ ಭೇಷಜಮ್॥ ಅಪ್ಸು ಮೇ ಸೋಮೋ ಅಬ್ರವೀದಂತರ್ವಿಶ್ವಾನಿ ಭೇಷಜಾ । ಅಗ್ನಿಂ ಚ ವಿಶ್ವಶಂಭುವಮ್ ॥

---

ಕೌತುಕ ಬಂಧನವೆಂದರೆ ಮಂತ್ರಪುರಸ್ಸರವಾಗಿ ಐದುಎಳೆಯ ದಾರಕ್ಕೆ ಕುಂಭೋದಕದಿಂದ ಐದು ದರ್ಭೆಯ ಕೂರ್ಚದಿಂದ ಮಂತ್ರಗಳನ್ನು ಪಠಿಸುತ್ತಾ ಪ್ರೋಕ್ಷಿಸಿ, ಜಾತವೇದಸೇ ಎಂಬ ಮಂತ್ರದಿಂದ ಆ ಸೂತ್ರಕ್ಕೆ ಗಂಧವನ್ನು ಲೇಪಿಸಿ, ''ವಿಶ್ವೇತ್ತಾತೇ'' ಎಂಬ ಮಂತ್ರದಿಂದ ಪುರುಷನ ಬಲಗೈಗೂ ''ಶ್ರಿಯೇಜಾತ'' ಎಂಬ ಮಂತ್ರದಿಂದ ಸ್ತ್ರೀಯ ಎಡಗೈಯನ್ನು ಮುಟ್ಟಿಸಿ ಬಲಗೈಗೆ ಕಟ್ಟಬೇಕು. ನ್ಯಾಯವಾಗಿ ಸ್ತ್ರೀಗೆ ಎಡಗೈಗೇ ಕಟ್ಟಬೇಕು. ಎಡಗೈಯಿನ ಕೆಲಸಗಳಲ್ಲಿ ಕೆಲವು ವಿರೋಧ ವಾದ್ದರಿಂದ ಮಂತ್ರಪೂತವಾದ ಆ ದಾರವು ಅಶುಚಿಯಾಗುತ್ತದೆಂಬ ಭಾವನೆಯಿಂದ ಹಿರಿಯರು ಎಡಗೈಗೆ ಮುಟ್ಟಿಸಿ ಬಲಗೈಗೆ ಕಟ್ಟುವ ಸಂಪ್ರದಾಯವು ನಮ್ಮ ಕಡೆ ಬಂದಿದೆ. ದೇಶಾಂತರಗಳಲ್ಲಿ

